# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಫೆಬ್ರವರಿ ೧೯, ೨೦೧೫ ( ಮಾಘ ೩೦, ಶಕ ವರ್ಷ ೧೯೩೬)<br>**Bengaluru, Thursday, February 19, 2015 (Magha 30, Shaka Varsha 1936)** | ಸಂಚಿಕೆ ೮<br>**Issue 8** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ :** ನ್ಯಾಯಾಂಗ ಅಧಿಕಾರಿಗಳ ದ್ವೈವಾರ್ಷಿಕ ಸಮ್ಮೇಳನದಲ್ಲಿ ಭಾಗವಹಿಸುವ ನ್ಯಾಯಾಧೀಶರಿಗೆ ವಿಶೇಷ ಸಾಂದರ್ಭಿಕ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಆಇ 5 ಸೇನಿಸೇ 2013, ದಿನಾಂಕ : 08–04–2013.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ದ್ವೈವಾರ್ಷಿಕ ಸಮ್ಮೇಳನದಲ್ಲಿ ಭಾಗವಹಿಸುವ ನ್ಯಾಯಾಧೀಶರುಗಳಿಗೆ ವಿಶೇಷ ಸಾಂದರ್ಭಿಕ ರಜೆಯೆಂದು ಪರಿಗಣಿಸಿ ನಿಯತಗೊಳಿಸುವಲ್ಲಿ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿಸಲಾಗಿದೆ. ಮೇಲೆ ಓದಲಾದ ಆದೇಶದಲ್ಲಿನ ಸೌಲಭ್ಯವನ್ನು ನೀಡುವ ಬಗ್ಗೆ ಸರ್ಕಾರವು ಪುನರ್ ಪರಿಶೀಲಿಸಿ, ಈ ಕೆಳಕಂಡಂತೆ ನಿರ್ಧಾರ ಕೈಗೊಂಡಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 7 ಸೇನಿಸೇ 2014, ಬೆಂಗಳೂರು, ದಿನಾಂಕ : 16–12–2014.**

ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ದ್ವೈವಾರ್ಷಿಕ ಸಮ್ಮೇಳನದಲ್ಲಿ ಭಾಗವಹಿಸುವ ನ್ಯಾಯಾಧೀಶರುಗಳಿಗೆ ವಿಶೇಷ ಸಾಂದರ್ಭಿಕ ರಜೆಯೆಂದು ಪರಿಗಣಿಸಿ ಹೊರಡಿಸಿರುವ ದಿನಾಂಕ : 08–04–2013ರ ಸರ್ಕಾರಿ ಆದೇಶ ಸಂಖ್ಯೆ : ಆಇ 5 ಸೇನಿಸೇ 2013, ಆದೇಶವನ್ನು ಹಿಂಪಡೆದಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 13**
**SC-100**

**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–1).

### ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಪೌರಾಡಳಿತ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವ ಕುರಿತು–ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಆಇ 258 ಇಎಂಸಿ 94, ದಿನಾಂಕ : 9–12–1998.
2. ಸರ್ಕಾರದ ಆದೇಶ ಸಂಖ್ಯೆ : ನಅಇ 34 ಇಎಂಸಿ 2005, ದಿನಾಂಕ : 29–7–2005.
3. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಅಧಿಸೂಚನೆ ಸಂಖ್ಯೆ : ಪೌನಿ : ಸಿಬ್ಬಂದಿ: ಹೈಕ : ಮೀಸಲಾತಿ : ಸಿಆರ್ : 148 : 13–14, ದಿನಾಂಕ : 19–05–2014.
4. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : ಸಿ ನಂ. 1374: ಡಿಎಂಎ 11 : ಕೆಎಂಎಎಸ್ : 2014 ದಿನಾಂಕ : 05–06–2014.
5. ಸರ್ಕಾರದ ಪತ್ರ ಸಂಖ್ಯೆ : ನಅಇ 91 ಇಎಂಸಿ 2014, ದಿನಾಂಕ : 28–06–2014.
6. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : ಸಿ ನಂ. 1374 : ಡಿಎಂಎ 11 : ಕೆಎಂಎಎಸ್ : 2014, ದಿನಾಂಕ : 17–09–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 9–12–1998ರ ಕಾರ್ಯಕಾರಿ ಆದೇಶದ ಪ್ರಕಾರ ಐದು ವರ್ಷ ಸೇವೆ ಸಲ್ಲಿಸಿದ ಪುರಸಭಾ ಹಾಗೂ ಪೌರಾಡಳಿತ ನಿರ್ದೇಶನಾಲಯದ ವಿವಿಧ ವೃಂದದ ನೌಕರರನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಕಾರ್ಯಕಾರಿ ಆದೇಶದ ಮೂಲಕ ವಿಲೀನಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದನ್ವಯ ಪೌರ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು, ಮತ್ತು ಸದರಿ ವೃಂದದ ನೇರ ನೇಮಕಾತಿ ಹುದ್ದೆಗಳನ್ನು ತುಂಬಲು ಈ ಕೆಳಕಂಡಂತೆ ಅನುಪಾತವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ :–

| | | | |
|---|---|---|---|
| I. | Direct Recruitment | | 33 1/3 |
| II. | By Absorption | | 66 2/3 |
| | 1) Managers belongs to Municipal Service | 21.50% | |
| | 2) Revenue Officer belongs to Municipal Service | 21.50% | |
| | 3) Sr. Health Inspectors belongs to Municipal Service | 21.50% | |
| | 4) Manager in the office of the Director of Municipal Administration | 2.16% | |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯರವರು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈ–ಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರಡಿಯಲ್ಲಿ ಪೌರಾಡಳಿತ ಇಲಾಖೆಯ ಹೈದ್ರಾಬಾದ್–ಕರ್ನಾಟಕ ಪ್ರದೇಶದ ನಗರಸಭೆ, ಪುರಸಭೆ, ಪಟ್ಟಣ ಪಂಚಾಯತಿಗಳಲ್ಲಿನ ವಿವಿಧ ವೃಂದಗಳಲ್ಲಿ ಸ್ಥಳೀಯ ವ್ಯಕ್ತಿಗಳಿಗೆ ಶೇ. 75, ಶೇ. 80 ರಷ್ಟು ಸಂಖ್ಯೆಗಳ ಹುದ್ದೆಗಳನ್ನು ಗುರುತಿಸಿ ಅಧಿಸೂಚನೆ ಹೊರಡಿಸಿರುತ್ತಾರೆ. ಸದರಿ ಅಧಿಸೂಚನೆಗಳನ್ವಯ ಹೈದ್ರಾಬಾದ್ ಕರ್ನಾಟಕ ಭಾಗದ ವ್ಯಾಪ್ತಿಯ ಅಭ್ಯರ್ಥಿಗಳಿಗೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ಒಟ್ಟು 11 ಹುದ್ದೆಗಳನ್ನು ಗುರುತಿಸಿದ್ದು, ಇವುಗಳಲ್ಲಿ 07 ಹುದ್ದೆಗಳು ವಿಲೀನ/ಬಡ್ತಿ ಮೂಲಕ ಮತ್ತು 04 ಹುದ್ದೆಗಳು ನೇರ ನೇಮಕಾತಿ ಮೂಲಕ ತುಂಬಲು ಅವಕಾಶ ಕಲ್ಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರು ಪ್ರಸ್ತುತ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಿವಿಧ ವೃಂದದಲ್ಲಿ ಐದು ವರ್ಷಕ್ಕಿಂತ ಹೆಚ್ಚಿಗೆ ಸೇವೆ ಸಲ್ಲಿಸುತ್ತಿರುವ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದು, ಅದರಂತೆ ರಾಜ್ಯದಲ್ಲಿ ಒಟ್ಟು 68 ಪಟ್ಟಣ ಪಂಚಾಯತಿಗಳು ಅಸ್ತಿತ್ವದಲ್ಲಿದ್ದು, ಪ್ರಸ್ತುತ ಒಟ್ಟು 31 ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ಹುದ್ದೆಗಳು ಖಾಲಿ ಇದ್ದು, ಪೌರ ಸೇವೆಯ ಅರ್ಹ ನೌಕರರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯದ ಇವರು ದಿನಾಂಕ : 05–06–2014ರಂದು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸೇವಾ ಜ್ಯೇಷ್ಠತೆಯಲ್ಲಿ ಹಿರಿಯರಾಗಿದ್ದ ಕೆಲವು ನೌಕರರುಗಳ ಸೇವಾ ಮಾಹಿತಿಗಳು ಪೌರಾಡಳಿತ ನಿರ್ದೇಶನಾಲಯದಲ್ಲಿ ಸ್ವೀಕೃತವಾಗದಿರುವುದನ್ನು ಗಮನಿಸಿ, ಅಂತಹ ನೌಕರರುಗಳಿಗೆ ಅವಶ್ಯಕ ಸೇವಾ ಮಾಹಿತಿಗಳನ್ನು ಒದಗಿಸುವಂತೆ ಅಂತಿಮವಾಗಿ ನೋಟೀಸ್ ನೀಡಿ ಅವರಿಂದ ಮಾಹಿತಿ ಪಡೆದು, ಅರ್ಹರಿರುವ ನೌಕರರುಗಳನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (5)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರಿಗೆ ನಿರ್ದೇಶನ ನೀಡಲಾಗಿತ್ತು.

ದಿನಾಂಕ : 28–06–2014ರ ಸರ್ಕಾರದ ಪತ್ರದಲ್ಲಿ ಸೂಚಿಸಿರುವಂತೆ ಮರು ಪರಿಶೀಲಿಸಿ, ಪೌರ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವುದಕ್ಕೆ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಈ ಕೆಳಗಿನಂತೆ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ಹುದ್ದೆಗಳು ಖಾಲಿ ಇರುತ್ತವೆ.

| **ಕ್ರ. ಸ.** | **ವೃಂದವಾರು ನೌಕರರ ಮಾಹಿತಿ** | **ವೃಂದವಾರು ಲಭ್ಯವಿರುವ ಹುದ್ದೆಗಳ ಮಾಹಿತಿ** |
|---|---|---|
| 1 | ಕಛೇರಿ ವ್ಯವಸ್ಥಾಪಕ ವೃಂದದಲ್ಲಿ | 10 |
| 2 | ಕಂದಾಯಾಧಿಕಾರಿ ವೃಂದದಲ್ಲಿ | 13 |
| 3 | ಹಿರಿಯ ಆರೋಗ್ಯ ನಿರೀಕ್ಷಕರ ವೃಂದದಿಂದ | 08 |
| 4 | ಪೌರಾಡಳಿತ ನಿರ್ದೇಶನಾಲಯದ ವ್ಯವಸ್ಥಾಪಕರ ವೃಂದದಿಂದ | ಹುದ್ದೆ ಖಾಲಿ ಇಲ್ಲ |
| | **ಒಟ್ಟು** | **31** |

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಪೌರ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ಹುದ್ದೆಗಳಿಗೆ ವಿಲೀನಗೊಳಿಸಲು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಪರಿಶೀಲಿಸಿ, ಸೇವಾ ಮಾಹಿತಿಗಳು/ಅಗತ್ಯ ದಾಖಲೆಗಳು ಲಭ್ಯವಿರುವ ನೌಕರರುಗಳ ಸೇವಾ ವಿವರಗಳನ್ನು ಪರಿಶೀಲಿಸಿ ಸದರಿಯವರುಗಳನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ನಅಇ 91 ಇಎಂಸಿ 2014, ಬೆಂಗಳೂರು, ದಿನಾಂಕ : 10–10–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಕಲಂ 365(1)(2)(ಎ) ಪ್ರಕಾರ ಮೇಲೆ ತಿಳಿಸಿರುವ ವಿವಿಧ ವೃಂದಗಳ ಪೌರ ಸೇವೆಯ ವಿವಿಧ ವೃಂದದ (15 ಜನ) ನೌಕರರುಗಳನ್ನು ಸೇವಾ ಜ್ಯೇಷ್ಠತೆಯನ್ನು ಪರಿಗಣಿಸಿ, ತಕ್ಷಣದಿಂದ ಜಾರಿಗೆ ಬರುವಂತೆ, ಕರ್ನಾಟಕ ಪೌರಾಡಳಿತ ಸೇವೆಯ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ ರೂ. 17650–32000/– (ಮುಖ್ಯಾಧಿಕಾರಿ ಶ್ರೇಣಿ–2) ಹುದ್ದೆಯಲ್ಲಿ ಸ್ಥಾನಪನ್ನ ಆಧಾರದ ಮೇಲೆ ವೇತನವನ್ನೊಳಗೊಂಡಂತೆ ಎಲ್ಲಾ ಸೇವಾ ಸೌಲಭ್ಯಗಳನ್ನು ನೀಡಿ, ಕೆ.ಎಂ.ಎ.ಎಸ್. ಅಧಿಕಾರಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಹಾಗೂ ಈ ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ವಿಲೀನಗೊಳಿಸಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

**1) ಹಿರಿಯ ಆರೋಗ್ಯ ನಿರೀಕ್ಷಕರ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿರುವ ಅಧಿಕಾರಿ/ನೌಕರರ ಹೆಸರು**

| ಕ್ರ. ಸ. | ನೌಕರರ ಹೆಸರು | ದಿನಾಂಕ : 1–1–2013ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|
| 1 | ಶ್ರೀ ಸ್ಟೀಫನ್ ಪ್ರಕಾಶ್ | 168 |
| 2 | ಶ್ರೀ ವಿಜಯಕುಮಾರ್ ಸುಲಾವೆ | 170 |
| 3. | ಶ್ರೀ ಎಲ್.ಎಂ. ಮೂಲಿ | 188 |

**2) ಕಛೇರಿ ವ್ಯವಸ್ಥಾಪಕರ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿರುವ ಅಧಿಕಾರಿ/ನೌಕರರ ಹೆಸರು**

| ಕ್ರ. ಸ. | ನೌಕರರ ಹೆಸರು | ದಿನಾಂಕ : 1–1–2013ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|
| 1 | ಶ್ರೀಮತಿ ಬಿ.ಎಂ. ಜೋಶಿ | 158 |
| 2 | ಶ್ರೀ ಬಸವರಾಜ್ ಫಕ್ಕೀರಪ್ಪ ಜಿಡ್ಡಿ | 169 |
| 3 | ಶ್ರೀ ಬಿ.ಎಂ. ಬಡಿಗೇರ | 170 |
| 4 | ಶ್ರೀ ವಿ.ಎಂ. ರಾಯ್ಕರ್ | 174 |
| 5 | ಶ್ರೀ ಆರ್.ಎಂ. ಕೊಡುಗೆ | 175 |
| 6 | ಶ್ರೀ ಎಸ್.ಬಿ. ಹೊನ್ನಳ್ಳಿ | 176 |
| 7 | ಶ್ರೀ ಆರ್.ಎಸ್. ಸುಣಗಾರ್ | 177 |

**1) ಕಂದಾಯಾಧಿಕಾರಿ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿರುವ ಅಧಿಕಾರಿ/ನೌಕರರ ಹೆಸರು**

| ಕ್ರ. ಸ. | ನೌಕರರ ಹೆಸರು | ದಿನಾಂಕ : 1–1–2013ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|
| 1 | ಶ್ರೀ ಡಿ.ಎಸ್. ಹರದಿ | 89 |
| 2 | ಶ್ರೀಮತಿ ವಿ. ರುಕ್ಮಿಣಿ | 105 |

**(ಭಾಗ–2)**

ಹೈದ್ರಾಬಾದ್–ಕರ್ನಾಟಕ ಪ್ರದೇಶದ ವಿಶೇಷ ವೃಂದವನ್ನು ಆಯ್ಕೆ ಮಾಡಿಕೊಂಡಿರುವ ಈ ಕೆಳಕಂಡ ನೌಕರರುಗಳನ್ನು ಪೌರಾಡಳಿತ ಸೇವೆಯ ಕೆ.ಎಂ.ಎ.ಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ಸಾಮಾನ್ಯ ಸೇವಾ ಷರತ್ತುಗಳಿಗೆ ಒಳಪಟ್ಟು ವಿಲೀನಗೊಳಿಸಿ ಆದೇಶಿಸಿದೆ.

| ಕ್ರ. ಸ. | ನೌಕರರ ಹೆಸರು | ವೃಂದವಾರು | ದಿನಾಂಕ : 1–1–2013ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|---|
| 1 | ಶ್ರೀ ಶಿವಕುಮಾರ್ | ಹಿರಿಯ ಆರೋಗ್ಯ ನಿರೀಕ್ಷಕರು | 198 |
| 2 | ಶ್ರೀ ಶಂಕರಪ್ಪ | ಕಂದಾಯಾಧಿಕಾರಿ | 96 |
| 3. | ಶ್ರೀ ಬಿ. ಬಾಬು | ಕಂದಾಯಾಧಿಕಾರಿ | 97–ಎ |

**ಷರತ್ತುಗಳು :**

ಈ ಮೇಲ್ಕಂಡ ನೌಕರರುಗಳನ್ನು ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 9–12–1998ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 14**

**SC-200**

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ (ಎಂ.ಎ–1).

## FOREST, ECOLOGY AND ENVIRONMENT SECRETARIAT

**Sub :** Diversion of 0.58 ha. of forest land in Harihar Taluk for laying of water pipelines, supply of drinking water to Kondajji and other 11 villages in favour of the Executive Engineer, Panchayat Raj Engineering Division, Davangere-reg.

**Read :**

1. Letter No. A5(5) GFL.CR 32/2008-09, dated : 17/21-10-2008 of Principal Chief Conservator of Forests (Head of Forest Force), Bengaluru.
2. State Government letter No. FEE 19 FLL 2009, dated : 29-04-2009.
3. Letter No. 4-KRB606/2009-BAN/4761, dated : 12-06-2009 of Government of India, Ministry of Environment and Forests, Regional Office, Bengaluru.
4. Letter No. A5(4)GFL.CR32/2008-09, dated : 07-03-2013 of Principal Chief Conservator of Forests (Head of Forest Force), Bengaluru.
5. State Government Letter No. FEE 19 FLL 2009, dated : 11-06-2014.
6. Letter No.4 KRB606/2009-BAN/6093, dated : 20-10-2014 of Government of India, Ministry of Environment and Forests, Regional Office, Bengaluru.

**PREAMBLE :**

The Principal Chief Conservator of Forests (Head of Forest Force), Bangalore vide letter read at (1) above has submitted the proposal for diversion of 0.58 ha. of forest land in Harihar Taluk for laying of water pipelines for supply of drinking water to Kondajji and other 11 villages in favour of the Executive Engineer Panchayat Raj Engineering Division, Davangere subject to certain conditions.

Accordingly the proposal was recommended to Government of India by State Government letter read at (2) above.

The Government of India, Ministry of Environment and Forests, Regional Officer, Bengaluru vide their letter read at (3) above given its in-principal approval (Stage-I) subject to fulfillment of certain conditions and the same was communicated to the Principal Chief Conservator of Forest (Head of Forests Force), Bengaluru fo compliance.

The Principal Chief Conservator of Forests, Bengaluru vide his report read at (4) above furnished the compliance report and the same was sent to Government of India vide letter read at (5) above.

Finally, Government of India Ministry of Environment and Forests Regional Office, Bengaluru vide their letter read at (6) above has conveyed its final approval (Stage-II) under Section 2 of Forest (Conservation) Act, 1980 for diversion of 0.58 hectares of forest land in **Harihar** Taluk for laying of water pipelines for supply of drinking water to Kondajji and other 11 villages in favour of the Executive Engineer, Panchayat Raj Engineering Division, Davangere subject to certain conditions.

The proposal has been examined in detail and hence the order.

**GOVERNMENT ORDER NO. FEE 19 FLL 2009, BANGALORE, DATED : 10-12-2014.**

In the Circumstances explained in the preamble above, Government are pleased to accord sanction under Section 2 of Forest (Conservation) Acts 1980 for diversion of 0.58 hectares of forest land in Harihar Taluk for laying of water pipelines for supply of drinking water to Kondajji and other 11 villages in favour of the Executive Engineer, Panchayat Raj Engineering Division, Davangere subject to certain conditions.

1. The legal status of the forest land shall remain unchanged.
2. The lease period is for 20 (Twenty) years only.
3. Additional amount of the Net Present Value (NPV) of the diverted forest land if any, becoming due after revision of the same by the Hon'ble Supreme Court of India in future, shall be charged by the State Government from the User Agency. The user agency shall furnish an undertaking to this effect.
4. The demarcation of the outer boundary of the forest area being diverted shall be carried out by erecting cement concrete pillars duly numbered at an interval of 20 meters at the cost of user agency.
5. Handing and taking over of land and commencement of work in the land shall be done within a period of two years from the date of Stage-II approval.
6. The DGPS readings of the 0.58 hectares of forest land diverted shall be communicated to office of the Addl. Principal Chief Conservator of Forests (Central), Ministry of Environment and Forests, Government of India, Regional Office, Bangaluru within 30 days.
7. The land shall be utilized only for the purpose for which it is diverted.
8. If the land is not required for the purpose for which it is diverted the same should be resumed back to the Forest Department by the Conservator of Forests under Section 82 of the Karnataka Forest Act 1963.
9. The user agency has to pay the lease rent as fixed by the Government at the time of sanction and any sub quent orders in this regard.
10. The Karnataka Forest Act 1963 and Rules 1969 will be applicable for any violation.
11. The User Agency shall also abide by all the conditions to be imposed/and to be imposed in future by Government of India, the Government of Karnataka and the Principal Chief Conservator of Forests (Head of Forest Force).

By Order and in the name of the Governor of Karnataka

**P.R. 15** **L. SHARADA**

**SC-100** Under Secretary to Government,

Forest, Ecology and Environment Department.

## ಆರ್ಥಿಕ ಸಚಿವಾಲಯ

**ವಿಷಯ :** ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಬೆಳಗಾವಿ ಇಲ್ಲಿನ ಆರ್ಥಿಕ ಸಲಹೆಗಾರರ ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ವೃಂದ ಬಲಕ್ಕೆ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಸುತ್ತೋಲೆ ಸಂಖ್ಯೆ : ಸಿಆಸುಇ 38 ಎಸ್‌ಎಸ್‌ಆರ್ 85, ದಿನಾಂಕ : 13–06–1986.
2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಸುತ್ತೋಲೆ ಸಂಖ್ಯೆ : ಸಿಆಸುಇ 35 ಎಸ್‌ಎಸ್‌ಆರ್ 90, ದಿನಾಂಕ : 1–10–1990.
3. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ : ಸಿಎಸ್‌ಎ 1 ಸಿ & ಆರ್ 2013 (ವೃಂದ ಬಲ)/3035, ದಿನಾಂಕ : 2–12–2014.

**ಪ್ರಸ್ತಾವನೆ :**

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)ಯು ಆದೇಶ ದಿನಾಂಕ : 7–9–2006 ಸಂಖ್ಯೆ : ಆಕುಕ 266 ಎಂಪಿಎಸ್ 2006ಕ್ಕೆ ಸೇರ್ಪಡೆ ದಿನಾಂಕ : 12–9–2006 ರಲ್ಲಿ ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಬೆಳಗಾವಿ ಇಲ್ಲಿ ಸೃಜನೆಯಾಗಿರುವ ಆರ್ಥಿಕ ಸಲಹೆಗಾರರ ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರ ವೃಂದದಿಂದ ಭರ್ತಿ ಮಾಡಲಾಗಿದ್ದು. ಈ ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ವೃಂದ ಬಲಕ್ಕೆ ಸೇರ್ಪಡೆ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸೂಚನೆಗಳನ್ವಯ ಪರಿಶೀಲಿಸಲಾಯಿತು. ಸದರಿ ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ಹುದ್ದೆಯಿಂದಲೇ ತುಂಬಬೇಕಾಗಿದ್ದು ಅದನ್ನು ವೃಂದ ಬಲಕ್ಕೆ ತಾತ್ಕಾಲಿಕವಾಗಿ ಸೇರಿಸಲು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 19 ರಾಲೆಪ 2014, ಬೆಂಗಳೂರು, ದಿನಾಂಕ : 06-12-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)ಯು ಆದೇಶ ಸಂಖ್ಯೆ : ಆಕುಕ 266 ಎಂಪಿಎಸ್ 2006, ದಿನಾಂಕ : 7-9-2006ರಲ್ಲಿ ಮಂಜೂರಾಗಿರುವ ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಬೆಳಗಾವಿ ಇಲ್ಲಿನ ಆರ್ಥಿಕ ಸಲಹೆಗಾರರ ಹುದ್ದೆಯನ್ನು ದಿನಾಂಕ : 12-9-2006 ರಿಂದ ಸೇರ್ಪಡೆಗೊಂಡಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರ ವೃಂದ ಬಲಕ್ಕೆ ಈ ಕೆಳಗಿನಂತೆ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಸೇರ್ಪಡೆ ಮಾಡಲಾಗಿದೆ.

**ಜಂಟಿ ನಿಯಂತ್ರಕರ ವೃಂದ**

| ಕ್ರ. ಸಂ. | ಸೃಜನೆಯಾದ ಕಛೇರಿಯ ವಿವರ | ಸೃಜನೆಯಾದ ಆದೇಶ ಸಂಖ್ಯೆ & ದಿನಾಂಕ | ಸೃಜನೆಯಾದ ಹುದ್ದೆಗಳ ಸಂಖ್ಯೆ |
|---|---|---|---|
| 1 | ಆರ್ಥಿಕ ಸಲಹೆಗಾರರು, ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಬೆಳಗಾವಿ | ಆದೇಶ ಸಂಖ್ಯೆ : ಆಕುಕ 266 ಎಂಪಿಎಸ್ 2006, ದಿನಾಂಕ : 7-9-2006 ಸೇರ್ಪಡೆ ದಿನಾಂಕ : 12-9-2006. | 01 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 17

ಎನ್. ಲಕ್ಷ್ಮಣ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯಲ್ಲಿ ಯೋಜನಾ ನಿರ್ದೇಶಕರು (ಖಜಾನೆ-II) ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 716 ಸಅಸೇ 2013, ದಿನಾಂಕ : 10-09-2013.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಖಜಾನೆ- II) ಇವರ ಕಡತ ಸಂಖ್ಯೆ : ಪಿಆರ್‌ಎಸ್ ಖಜಾನೆ- II /4538/2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ, ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಎಲ್ಲಾ ಇಲಾಖೆಗಳ ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಂತೆ ಆರ್ಥಿಕ ನಿರ್ವಹಣಾ " ಖಜಾನೆ- II " ತಂತ್ರಾಂಶ ಅನುಷ್ಠಾನಕ್ಕಾಗಿ ಆರ್ಥಿಕ ಇಲಾಖೆಯಲ್ಲಿ ಯೋಜನಾ ನಿರ್ದೇಶಕರು (ಖಜಾನೆ- II) ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಈ ಹುದ್ದೆಯ ಅವಧಿಯು ದಿನಾಂಕ : 10-09-2014ಕ್ಕೆ ಮುಕ್ತಾಯಗೊಳ್ಳುವುದರಿಂದ ಖಜಾನೆ- II ರ ಅನುಷ್ಠಾನಕ್ಕೆ ತಡೆಯಾಗುವುದರಿಂದ ಯೋಜನಾ ನಿರ್ದೇಶಕರು (ಖಜಾನೆ- II) ಹುದ್ದೆಯನ್ನು ಮತ್ತೊಂದು ವರ್ಷದವರೆಗೆ ಮುಂದುವರೆಸುವಂತೆ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 357 ಸಉಸೇ 2014, ಬೆಂಗಳೂರು, ದಿನಾಂಕ : 11-12-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಯೋಜನಾ ನಿರ್ದೇಶಕರು (ಖಜಾನೆ- II) ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ : 10-09-2014 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10-7-1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 18

ಡಾ॥ ಗೀತಾ ಎಲ್.
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು-6) (ಪ್ರಭಾರ).

## ಆರ್ಥಿಕ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆಯ 2001–02ನೇ ಸಾಲಿನ ಸಾರಾಯಿ ಗುತ್ತಿಗೆ ಹಣವನ್ನು ವಸೂಲು ಮಾಡಲು ವಿಫಲರಾದ ಶ್ರೀ ರೋಹಿದಾಸ್ ನಾಯಕ್, ನಿವೃತ್ತ ಅಬಕಾರಿ ಉಪ ಆಯುಕ್ತರು, ಮತ್ತು ಶ್ರೀ ಕೆ.ಆರ್.ಗೌಡರ್, ನಿವೃತ್ತ ಅಬಕಾರಿ ಅಧೀಕ್ಷಕರು ಅವರುಗಳ ವಿರುದ್ದ– ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆಇ 90 ಇಪಿಎಸ್ 2003, ದಿನಾಂಕ:19–07–2006
2. ಶ್ರೀ ವಿ.ಎಸ್.ಅರಟ್ಟಿ , ನಿವೃತ್ತ ಜಿಲ್ಲಾ ನ್ಯಾಯಾಧೀಶರು ಅವರ ವಿಚಾರಣಾ ವರದಿ ದಿನಾಂಕ:20–07–2007
3. ಎರಡನೇ ಕಾರಣ ಕೇಳುವ ನೋಟಿಸ್ ಸಂಖ್ಯೆ:ಎಫ್‌ಡಿ 90 ಇಪಿಎಸ್ 2003 ದಿನಾಂಕ:29–12–2007.
4. ಆರೋಪಿ ಅಧಿಕಾರಿಗಳ ಉತ್ತರ
    1. ರೋಹಿದಾಸ್ ನಾಯಕ್, ಅಬಕಾರಿ ಉಪ ಆಯುಕ್ತರು, (ದಿನಾಂಕ:23–01–2008)
    2. ಕೆ.ಆರ್.ಗೌಡರ್, ಅಬಕಾರಿ ಅಧೀಕ್ಷಕರು, ದಿನಾಂಕ:10–01–2008
5. ಸರ್ಕಾರದ ಪತ್ರ ಸಂಖ್ಯೆ: ಆಇ/90/ಇಪಿಎಸ್/2003 ದಿನಾಂಕ:24–04–2009
6. ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ ರವರ ಪತ್ರ ಸಂಖ್ಯೆ: ಪಿಎಸ್‌ಸಿ 184 ಸಿಎನ್‌ಎಸ್ 2013 ದಿನಾಂಕ:27–12–2012

**ಪ್ರಸ್ತಾವನೆ:**

ಶ್ರೀ ರೋಹಿದಾಸ್ ನಾಯಕ್, ಅಂದಿನ ಅಬಕಾರಿ ಉಪ ಆಯುಕ್ತರು, ಶಿವಮೊಗ್ಗ ಜಿಲ್ಲೆ ಮತ್ತು ಕೆ.ಆರ್.ಗೌಡರ್, ಅಂದಿನ ಅಬಕಾರಿ ಅಧೀಕ್ಷಕರು, ಇವರು ಅಬಕಾರಿ ಉಪ ಆಯುಕ್ತರ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ 2001–02ನೇ ಸಾಲಿಗೆ ಸಂಬಂಧಿಸಿದಂತೆ ಶಿವಮೊಗ್ಗ, ಭದ್ರಾವತಿ, ಶಿಕಾರಿಪುರ, ಸಾಗರ ಮತ್ತು ಹೊಸನಗರ ತಾಲ್ಲೂಕುಗಳ ರೂ.1,86,77,200/– ಸಾರಾಯಿ ಗುತ್ತಿಗೆ ಹಣ ಮತ್ತು ಅದರ ಮೇಲಿನ ಬಡ್ಡಿ ರೂ.74,57,093/– ಗಳನ್ನು ವಸೂಲು ಮಾಡದೇ ಭಾಕಿ ಉಳಿಸಿರುತ್ತಾರೆ ಮತ್ತು 2002–03ನೇ ಸಾಲಿಗೆ ಸಂಬಂಧಿಸಿದಂತೆ ಶಿವಮೊಗ್ಗ, ಭದ್ರಾವತಿ, ಶಿಕಾರಿಪುರ, ಸಾಗರ, ಸೊರಬ, ತೀರ್ಥಹಳ್ಳಿ ಮತ್ತು ಹೊಸನಗರ ತಾಲ್ಲೂಕುಗಳ ರೂ.5,50,79,482/–ಗಳ ಸಾರಾಯಿ ಗುತ್ತಿಗೆ ಹಣವನ್ನು ವಸೂಲು ಮಾಡದೇ ಬಾಕಿ ಉಳಿಸಿರುತ್ತಾರೆ. ಶಿವಮೊಗ್ಗ ಮತ್ತು ಹೊಸನಗರ ತಾಲ್ಲೂಕುಗಳ ಸಾರಾಯಿ ಗುತ್ತಿಗೆ ಹಣದ ಬಾಬ್ತು ಗುತ್ತಿಗೆದಾರರಾದ ಶ್ರೀ ರಮೇಶ್ ರಾವ್ ಇವರು ನೀಡಿದ್ದ ಮೂರನೇ ಬ್ಯಾಂಕ್ ಗ್ಯಾರೆಂಟಿಯನ್ನು ನಗಧೀಕರಿಸಲು ಕ್ರಮ ಕೈಗೊಂಡಿರುವುದಿಲ್ಲ. ಇವರ ಅಧೀನ ಕಛೇರಿಗಳಾದ ಶಿವಮೊಗ್ಗ–1, ಶಿವಮೊಗ್ಗ–2 ಮತ್ತು ತೀರ್ಥಹಳ್ಳಿ ವಲಯಗಳ ಅಬಕಾರಿ ನಿರೀಕ್ಷಕರು ತಮ್ಮವ್ಯಾಪ್ತಿಯ ಸಾರಾಯಿ ಗುತ್ತಿಗೆದಾರರಿಂದ ಹಾಗೂ ಸಾಗರ ವಲಯದ ಮದ್ಯ ಸನ್ನದುದಾರರಿಂದ 2002–03ನೇ ಸಾಲಿನಲ್ಲಿ ಸಂಗ್ರಹಿಸಿದ ಸಾರಾಯಿ ಶುಲ್ಕ ಮತ್ತು ಅಬಕಾರಿ ಶುಲ್ಕದ ಹಣ ರೂ.1,11,36,246/–ಗಳನ್ನು ವಸೂಲು ಮಾಡಿ ಸದರಿ ಹಣವನ್ನು ಸರ್ಕಾರದ ಖಜಾನೆಗೆ ಜಮಾ ಮಾಡದೇ ದುರುಪಯೋಗ ಮಾಡಿಕೊಂಡು ಇಂತಹ ಅಕ್ರಮಗಳನ್ನು ನಿಯಂತ್ರಿಸುವಲ್ಲಿ ವಿಫಲರಾಗಿ ಸರ್ಕಾರಕ್ಕೆ ನಷ್ಟವುಂಟು ಮಾಡಿದ್ದಾರೆಂಬ ಕಾರಣಗಳ ಹಿನ್ನೆಲೆಯಲ್ಲಿ ಉಭಯ ಅಧಿಕಾರಿಗಳ ವಿರುದ್ದ ಶಿಸ್ತು ಕ್ರಮ ಜರುಗಿಸಿ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ವಿ.ಎಸ್.ಅರಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣಾಧಿಕಾರಿಯವರು, ಪ್ರಕರಣದ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರಮಾಂಕ(2)ರಲ್ಲಿ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿ ಆರೋಪಗಳ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

**ಕೆ.ಆರ್.ಗೌಡರ್, ಅಬಕಾರಿ ಅಧೀಕ್ಷಕರು,**

[ **ಆರೋಪ –1ಕ್ಕೆ ಸಂಬಂಧಿಸಿದಂತೆಃ–** ಆರೋಪಪರ ಸಾಕ್ಷಿ–1 ಇವರು ವಿಚಾರಣೆಯಲ್ಲಿ ಸಾಕ್ಷ್ಯ ದಾಖಲಿಸಿ ಇಎಕ್ಸ್‌ಪಿ–1 ರಿಂದ ಇಎಕ್ಸ್‌ಪಿ–37 ರವರೆಗಿನ ದಾಖಲೆಗಳನ್ನು ಹಾಜರುಪಡಿಸಿ ಗುರುತಿಸಿರುತ್ತಾರೆ. ಈ ದಾಖಲೆಗಳಲ್ಲಿ ಇಎಕ್ಸ್‌ಪಿ–1 ಅಡಿಟ್ ವರದಿಯಾಗಿರುತ್ತದೆ. ಉಳಿದವುಗಳು ಸಂಬಂಧಿಸಿದ ತಾಲ್ಲೂಕುಗಳಿಗೆ ಸೇರಿದ ಆರೋಪಗಳಿಗೆ ಸಂಬಂಧಿಸಿದ ಅವಧಿಯಲ್ಲಿನ ಹಲವಾರು ಪತ್ರ ವ್ಯವಹಾರಗಳು, ನಗದು ರಿಜಿಸ್ಟರ್‌ಗಳು, ರಸೀದಿ ಪುಸ್ತಕಗಳು ಆಗಿರುತ್ತವೆ. ಅಬಕಾರಿ ಆಯಕ್ತರ ನಿರ್ದೇಶನದ ಮೇರೆಗೆ ಶಿವಮೊಗ್ಗ ಕಛೇರಿಗೆ ಮೇ 2003ರಲ್ಲಿ ಭೇಟಿ ನೀಡಿ 2001–02 ಮತ್ತು 2002–03ನೇ ಸಾಲುಗಳ ಎಲ್ಲಾ ಸಂಬಂಧಪಟ್ಟ ದಾಖಲೆಗಳನ್ನು ತಪಾಸಣೆ ನಡೆಸಿ ವರದಿ ಸಲ್ಲಿಸಿರುವುದಾಗಿಯೂ, ಸದರಿ ವರದಿಯು ಇಎಕ್ಸ್‌ಪಿ–1 ಆಗಿರುತ್ತದೆಂದು ಸಾಕ್ಷ್ಯ ನೀಡಿದ್ದಾರೆ. ಅಪಾದಿತರು ಆಡಿಟ್ ವರದಿಯಲ್ಲಿ ಒಳಗೊಂಡಿರುವ ಅಂಶಗಳನ್ನು ನಿರಾಕರಿಸಿಲ್ಲ. ಆದರೆ, ಆಪಾದಿತರು ತಮ್ಮ ಸಾಕ್ಷ್ಯ ನುಡಿಯುವಾಗ, ಬರಗಾಲದ ಕಾರಣದಿಂದ, ನೀರಾ ತಯಾರಿಸುವ ರೈತ ಚಳುವಳಿಯ ಕಾರಣದಿಂದ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ಶಿಕಾರಿಪುರ ಸಿವಿಲ್ ನ್ಯಾಯಾಲಯದಲ್ಲಿ ಮೂಲದಾವೆ ಸಂಃ22ಃ2002ನ್ನು ದಾಖಲು ಮಾಡಿ, ಗುತ್ತಿಗೆ ಹಣದ ವಸೂಲಾತಿಯನ್ನು ಮಾಡದಂತೆ ದಿನಾಂಕ 16–03–2002ರಂದು ತಡೆಯಾಜ್ಞೆ ಪಡೆದಿದ್ದರೆಂದೂ, ಇದರಿಂದಾಗಿ ಸಾಕಷ್ಟು ಪ್ರಯತ್ನಗಳನ್ನು ಮಾಡಿದ್ದರೂ ಸಹ, ಉಳಿದ ತಾಲ್ಲೂಕುಗಳ ಸಾರಾಯಿ ಗುತ್ತಿಗೆ ಹಣವನ್ನು ಸಹ ವಸೂಲು ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿದ್ದಾರೆ. ಆದಾಗ್ಯೂ 8,20,869ಗಳನ್ನು ವಸೂಲು ಮಾಡಿದ್ದು ದಿನಾಂಕ 16–07–2003ರಂದು ಪಾವತಿಸಿರುವ ರೂ.63.00 ಲಕ್ಷಗಳ ಚಲನಿನಲ್ಲಿ ಈ ಮೊತ್ತವು ಒಳಗೊಂಡಿರುತ್ತದೆ. ಮತ್ತು ಅಕ್ಟೋಬರ್ 2003ರಲ್ಲಿ ಅಪಾದಿತರು ಅಬಕಾರಿ ಉಪ ಆಯುಕ್ತರ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿದ್ದು ರೂ.27.00 ಲಕ್ಷಗಳನ್ನು ವಸೂಲು ಮಾಡಿದ್ದು ಇದನ್ನು ದಿನಾಂಕ 21–10–2003ರಂದು ಚಲನ್ ಮೂಲಕ ಖಜಾನೆಗೆ ಪಾವತಿಸಲಾಗಿದೆಯೆಂದು ತಿಳಿಸಿದ್ದಾರೆ. ಈ ಸಂಬಂಧ ಚಲನ್ ಪ್ರತಿಗಳನ್ನು ಗುರುತಿಸಿದ್ದಾರೆ. ಅಬಕಾರಿ ಉಪ ಆಯುಕ್ತರು ಹೇಳಿದಂತೆ ತಮ್ಮ ಕರ್ತವ್ಯಗಳನ್ನು ಸೂಕ್ತವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿರುವುದಾಗಿ, ವಸೂಲಾತಿಗಾಗಿ ಗುತ್ತಿಗೆದಾರರಿಗೆ ಮೆಮೋಗಳನ್ನು ಹೊರಡಿಸಿ ಅವುಗಳ ಪ್ರತಿಗಳನ್ನು ಸಂಬಂಧಪಟ್ಟ ಅಬಕಾರಿ ನಿರೀಕ್ಷಕರರಿಗೆ ಕಳುಹಿಸಿ ಗುತ್ತಿಗೆ ಹಣದ ಬಾಕಿ ವಸೂಲಾತಿ ಸೂಚನೆ ನೀಡಲಾಗಿದೆಯೆಂದು ತಿಳಿಸಿ, ಈ ಬಗ್ಗೆ ದಾಖಲೆಗಳನ್ನು ಗುರುತಿಸಿದ್ದಾರೆ. ವೆಂಕಟೇಶ್ ಎಂಬ ಅಬಕಾರಿ ಉಪ ನಿರೀಕ್ಷಕರು ಅಪಾದಿತರ ನಿರ್ದೇಶನದ ಮೇರೆಗೆ ಗುತ್ತಿಗೆದಾರರಾದ ಶಿವಪ್ರಕಾಶ ಇವರನ್ನು ಸಂಪರ್ಕಿಸಿ ಬಾಕಿ ಇರುವ

ಗುತ್ತಿಗೆ ಹಣದ ಪಾವತಿಗಾಗಿ ಒತ್ತಾಯಿಸಿ ಅವರಿಂದ ಮುದ್ರಾಂಕ ಪತ್ರದ ಮೇಲೆ ಮುಚ್ಚಳಿಕೆ ಪತ್ರ ಬರೆಸಿಕೊಂಡಿರುತ್ತಾರೆ. ಗುತ್ತಿಗೆ ಹಣದ ಬಾಕಿ ವಸೂಲಾತಿಗಾಗಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರಿಗೆ ಮತ್ತು ಜಿಲ್ಲಾಧಿಕಾರಿಗಳು, ಅನಂತಪುರ ಜಿಲ್ಲೆ ಇವರಿಗೆ ಪತ್ರಗಳನ್ನು ಬರೆದಿರುವುದಾಗಿ ತಿಳಿಸಿದ್ದಾರೆ.]

[ದಿನಾಂಕ 22–05–2003 ರಂದು ರೂ.2,61,34,293–00ಗಳು ಬಾಕಿ ಉಳಿದಿತ್ತೆಂಬುದನ್ನು ಆಪಾದಿತರು ಒಪ್ಪುತ್ತಾರೆ. ಆ ಪೈಕಿ ಈ ಆಪಾದಿತರು ರೂ.8,20,869–00 ಮತ್ತು ರೂ.27,00,000–00ಗಳನ್ನು ವಸೂಲು ಮಾಡಿರುವುದು ಮತ್ತು ರೂ.8,01,100–00ಗಳಿಗೆ ಗುತ್ತಿಗೆದಾರರಿಂದ ಮುಚ್ಚಳಿಕೆ ಪಡೆದಿರುವುದು ಇವುಗಳ ಬಗ್ಗೆ ಮಂಡನಾಧಿಕಾರಿಯವರು ತಕರಾರು ವ್ಯಕ್ತಪಡಿಸಿಲ್ಲ. ಮಂಡನಾಧಿಕಾರಿಯವರ ವಾದವೆಂದರೆ ಆಪಾದಿತರು ಮೂಲದಾವೆ 22ಃ2002ರಲ್ಲಿ ಅಂತಹ ದಾವೆಗೆ ಕಾನೂನಿನಲ್ಲಿ ಅವಕಾಶವಿಲ್ಲವೆಂಬುದಾಗಿ ತಿಳಿಸಿ ತಡೆಯಾಜ್ಞೆಯನ್ನು ತೆರವುಗೊಳಿಸಲು ಯಾವುದೇ ಕ್ರಮಗಳನ್ನು ಕೈಗೊಂಡಿಲ್ಲವೆಂಬುದಾಗಿದೆ. ಸಾಮಾನ್ಯವಾಗಿ ಇಂತಹ ದಾವೆಗಳಲ್ಲಿ ಇಲಾಖಾ ಮುಖ್ಯಸ್ಥರು ಆಕ್ಷೇಪಣೆಗಳನ್ನು ತಯಾರಿಸಿ ಸರ್ಕಾರಿ ವಕೀಲರ ಮೂಲಕ ನ್ಯಾಯಾಲಯದ ಮುಂದೆ ಸಲ್ಲಿಸುತ್ತಾರೆ. ಸರ್ಕಾರಿ ವಕೀಲರು ನ್ಯಾಯಾಲಯದಲ್ಲಿ ಪ್ರಕರಣ ನಡೆಸುತ್ತಾರೆ. ಸರ್ಕಾರಿ ವಕೀಲರು ತಡೆಯಾಜ್ಞೆ ತೆರವುಗೊಳಿಸಲು ಸಾಕಷ್ಟು ಪ್ರಯತ್ನಪಟ್ಟರೂ, ನ್ಯಾಯಾಲಯಗಳಲ್ಲಿ ಕಾರ್ಯ ಒತ್ತಡದಿಂದಾಗಿ ದಾವೆಗಳನ್ನು ಬೇಗನೆ ಕೈಗೆತ್ತಿಕೊಳ್ಳಲು ಸಾಧ್ಯವಾಗುವುದಿಲ್ಲವೆಂಬುದು ಸಾಮಾನ್ಯವಾದ ಅನುಭವವಾಗಿರುತ್ತದೆ. ಆದುದರಿಂದ ತಡೆಯಾಜ್ಞೆಯು ದೀರ್ಘಕಾಲದವರೆಗೆ ಮುಂದುವರೆದ ಕಾರಣದಿಂದ ಬಾಕಿ ಗುತ್ತಿಗೆ ಹಣವನ್ನು ವಸೂಲು ಮಾಡಲು ಸಾಧ್ಯವಾಗದಿರುವುದಕ್ಕೆ ಅಪಾದಿತರನ್ನು ಗುರಿಪಡಿಸಲಾಗದು. ಆಪಾದಿತರು ನೀಡಿರುವ ಮೌಖಿಕ ಸಾಕ್ಷ್ಯ ಮತ್ತು ಹಾಜರುಪಡಿಸಿರುವ ಇಎಕ್ಸ್. ಡಿ–1 ರಿಂದ ಡಿ–15 ದಾಖಲೆಗಳ ಕಾರಣದಿಂದ ಆಪಾದಿತರು ತಮ್ಮ ಕರ್ತವ್ಯಗಳನ್ನು ಸೂಕ್ತವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿದ್ದಾರೆಂದೂ, ಅವರು ಕರ್ತವ್ಯ ನಿರ್ಲಕ್ಷ್ಯತೆ ಎಸಗಿಲ್ಲವೆಂದೂ, ನ್ಯಾಯಾಲಯದ ತಡೆಯಾಜ್ಞೆಯಿಂದಾಗಿ ಸಾರಾಯಿ ಗುತ್ತಿಗೆ ಹಣ ವಸೂಲಾಗದಿರುವುದನ್ನು ಆಪಾದಿತರ ಸರ್ಕಾರಿ ನೌಕರನಿಗೆ ಸಲ್ಲದ ನಡತೆಯೆಂದು ಹೇಳಲು ಬರುವುದಿಲ್ಲವೆಂದು ನಿರ್ಣಯಿಸಿದ್ದಾರೆ.

ಗುತ್ತಿಗೆದಾರರು ಆಯಾ ತಿಂಗಳ 10 ರಿಂದ 25ನೇ ದಿನಾಂಕದೊಳಗೆ ಗುತ್ತಿಗೆ ಹಣದ ಬಾಕಿ ಪಾವತಿಸಲು ತಪ್ಪಿದಾಗ, ಅಪಾದಿತರು ಕರ್ನಾಟಕ ಅಬಕಾರಿ ಸನ್ನದುಗಳ (ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 15(1)ರಡಿ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿತ್ತೆಂದು, ಈ ನಿಯಮವನ್ನು ಆಪಾದಿತರು ಉಲ್ಲಂಘಿಸಿದ್ದಾರೆಂದು ಆದ್ದರಿಂದ ಆರೋಪ–1 ಸಾಬೀತಾಗುವುದೆಂದು ಮಂಡನಾಧಿಕಾರಿಯು ವಾದ ಮಂಡಿಸಿದ್ದಾರೆ. ಆದರೆ ಈ ನಿಯಮದಡಿ ಗುತ್ತಿಗೆಯನ್ನು ರದ್ದುಪಡಿಸಲು ಜಿಲ್ಲೆಯ ಅಬಕಾರಿ ಉಪ ಆಯುಕ್ತರಿಗೆ ಅಧಿಕಾರವಿದ್ದು, ಆಪಾದಿತರು ಅಬಕಾರಿ ಅಧೀಕ್ಷಕರಾಗಿದ್ದು ಅವರಿಗೆ ಅಂತಹ ಅಧಿಕಾರ ನೀಡಿರುವುದಿಲ್ಲವೆಂದು ವಿಚಾರಣಾಧಿಕಾರಿಯು ನಿರ್ಣಯಕ್ಕೆ ಬಂದಿದ್ದಾರೆ. ಆರೋಪಪರ ಸಾಕ್ಷಿ–2 ಹೆಚ್.ಡಿ.ನಾಗರಾಜ ಇವರು ಸದರಿ ಅವಧಿಯಲ್ಲಿ ಅಬಕಾರಿ ಉಪ ಆಯುಕ್ತರ ಕಛೇರಿಯಲ್ಲಿ ಅಬಕಾರಿ ಉಪ ಅಧೀಕ್ಷಕರಾಗಿ ಕಾರ್ಯನಿರ್ವಹಿಸಿದ್ದು, ಸದರಿಯವರು ತಮ್ಮ ಸಾಕ್ಷ್ಯದಲ್ಲಿ ಆರೋಪವನ್ನು ಸಾಬೀತುಪಡಿಸಲು ಏನೂ ಹೇಳಿರುವುದಿಲ್ಲ. ಬದಲಾಗಿ ಆಪಾದಿತರು ತಾಲ್ಲೂಕುಗಳ ಅಬಕಾರಿ ನಿರೀಕ್ಷಕರು ಮತ್ತು ಉಪ ನಿರೀಕ್ಷಕರಿಗೆ ಗುತ್ತಿಗೆದಾರರಿಂದ ಗುತ್ತಿಗೆ ಹಣದ ವಸೂಲಾತಿಗಾಗಿ ನಿರ್ದೇಶನಗಳನ್ನು ನೀಡುತ್ತಿದ್ದರು ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಎರಡೂ ಪಕ್ಷಗಳು ನೀಡಿರುವ ಸಾಕ್ಷ್ಯವನ್ನು ಪರಿಗಣಿಸಲಾಗಿ, ಶಿಸ್ತು ಪ್ರಾಧಿಕಾರದ ಆರೋಪದಂತೆ ಅಪಾದಿತರು ನಿಯಮ 15(1)ನ್ನು ಉಲ್ಲಂಘನೆ ಮಾಡಿದ್ದಾರೆ, ನಡತೆ ನಿಯಮಗಳ ನಿಯಮ 3ನ್ನು ಉಲ್ಲಂಘನೆ ಮಾಡಿದ್ದಾರೆಂಬುದಕ್ಕೆ ಯಾವುದೇ ಸಾಕ್ಷ್ಯವಿಲ್ಲವೆಂದೂ, ಆದುದರಿಂದ ಆರೋಪ–1 ಸಂಶಯಾತೀತವಾಗಿ ಸಾಬೀತಾಗಿರುವುದಿಲ್ಲ]

[**ಆರೋಪ–2ಕ್ಕೆ ಸಂಬಂಧಿಸಿದಂತೆಃ–** ಆರೋಪಪರ ಸಾಕ್ಷಿ1 ಇವರ ಸಾಕ್ಷ್ಯ ಮತ್ತು ಇಎಕ್ಸ್.ಪಿ–1 ದಾಖಲೆಯಿಂದ ಆರೋಪ–2ರಲ್ಲಿ ನಮೂದಿಸಿರುವಂತೆ ದಿನಾಂಕ 22–02–2005ರಂದು ಗುತ್ತಿಗೆ ಹಣವು ಬಾಕಿ ಇತ್ತೆಂಬುದು ಸಾಬೀತಾಗುತ್ತದೆ. ಆದರೆ, ಆಪಾದಿತರು ತಮ್ಮ ಸಾಕ್ಷ್ಯದಲ್ಲಿ ಬಾಕಿ ಉಳಿದಿದ್ದ ಗುತ್ತಿಗೆ ಹಣ ಮತ್ತು ಬಡ್ಡಿಯನ್ನು ಗುತ್ತಿಗೆದಾರರು ನೀಡಿದ್ದ ಬ್ಯಾಂಕ್ ಗ್ಯಾರಂಟಿಯನ್ನು ನಗದೀಕರಿಸಿ ಪೂರ್ಣವಾಗಿ ವಸೂಲು ಮಾಡಲಾಗಿದೆ. ಇವುಗಳ ಬಗ್ಗೆ ಇಎಕ್ಸ್.ಡಿ–16 ರಿಂದ ಡಿ32ರ ದಾಖಲೆಗಳನ್ನು ಹಾಜರುಪಡಿಸಿರುವುದಾಗಿ ತಿಳಿಸಿದ್ದಾರೆ. ಇದನ್ನು ವಿಚಾರಣೆಯಲ್ಲಿ ಅಲ್ಲಗಳೆಯಲಾಗಿರುವುದಿಲ್ಲ. ಆದುದರಿಂದ ಆರೋಪ–2ನ್ನು ನಿಸ್ಸಂಶಯವಾಗಿ ರುಜುವಾತುಪಡಿಸಿರುವುದಿಲ್ಲ]

[**ಆರೋಪ–3ಕ್ಕೆ ಸಂಬಂಧಿಸಿದಂತೆಃ–** ಆರೋಪಪರ ಸಾಕ್ಷಿ–1ಯು ಇಎಕ್ಸ್‌ಪಿ–1 ದಾಖಲೆಯಲ್ಲಿ ಈ ಬಗ್ಗೆ ವಾಸ್ತವಾಂಶಗಳನ್ನು ವರದಿ ಮಾಡಿದ್ದಾರೆಂಬುದಕ್ಕೆ ಯಾವುದೇ ಸಂಶಯವಿಲ್ಲ. ಆದರೆ ಬ್ಯಾಂಕ್ ಗ್ಯಾರಂಟಿಗಳನ್ನು ಪಡೆಯುವುದು ಮತ್ತು ನಗದೀಕರಿಸುವುದು ಅಬಕಾರಿ ಉಪ ಆಯುಕ್ತರು, ಶಿವಮೊಗ್ಗ ಇವರಿಗೆ ನೀಡಲಾದ ಕರ್ತವ್ಯವಾಗಿದ್ದು, ಈ ಆಪಾದಿತರು ಈ ಕರ್ತವ್ಯಗಳನ್ನು ನಿರ್ವಹಿಸಲು ನಿಗದಿಪಡಿಸಲಾಗಿತ್ತು ಎಂಬುದಕ್ಕೆ ಯಾವುದೇ ದಾಖಲೆಯನ್ನು ವಿಚಾರಣೆಯಲ್ಲಿ ಹಾಜರುಪಡಿಸಿರುವುದಿಲ್ಲ. ಆರೋಪಪಟ್ಟಿಯ ಅನುಬಂಧ–2ರಲ್ಲಿ ಆರೋಪ–3ಕ್ಕೆ ಸಂಬಂಧಿಸಿದಂತೆ ನಮೂದಿಸಿರುವ ವಿವರಗಳು ಮತ್ತು ಇಎಕ್ಸ್.ಪಿ–1ರಲ್ಲಿ ಒಳಗೊಂಡಿರುವ ವಿಷಯಗಳಿಂದ ಕಂಡುಬರುವುದೇನೆಂದರೆ, ಬ್ಯಾಂಕ್ ಗ್ಯಾರಂಟಿ ಪಡೆಯುವ ಅಥವಾ ರಿವೋಕ್ ಮಾಡುವುದಕ್ಕೆ ಅಬಕಾರಿ ಉಪ ಆಯುಕ್ತರು ಜವಾಬ್ದಾರರಾಗಿದ್ದರು. ಅಂದಿನ ಅಬಕಾರಿ ಉಪ ಆಯುಕ್ತರು ಆ ಬಗ್ಗೆ ಪಿಡಬ್ಲ್ಯೂ–1 ಸಾಕ್ಷಿಯು ಪಿ–1 ದಾಖಲೆಯಲ್ಲಿ ಎತ್ತಿರುವ ಆಕ್ಷೇಪಣೆಗೆ ವಿವರಣೆಯನ್ನು ನೀಡಿರುವುದು ದಾಖಲಾಗಿದೆ. ಆದ್ದರಿಂದ ಈ ಆಪಾದಿತರ ವಿರುದ್ಧ ಈ ಆರೋಪವನ್ನು ಅನವಶ್ಯಕವಾಗಿ ಹೊರಿಸಿರುವುದಾಗಿದೆ ಎಂದು ಹೇಳಲು ಹಿಂಜರಿಕೆ ಇಲ್ಲವೆಂದು ತಿಳಿಸಿದ್ದಾರೆ. ಆದ್ದರಿಂದ ಆರೋಪ–3ನ್ನು ಸಾಬೀತುಪಡಿಸಲಾಗಿಲ್ಲ]

[**ಆರೋಪ–4ಕ್ಕೆ ಸಂಬಂಧಿಸಿದಂತೆಃ–** ಈ ಆರೋಪಕ್ಕೆ ಸಂಬಂಧಿಸಿದಂತೆ ಸಂಬಂಧಿಸಿದ ಅಬಕಾರಿ ನಿರೀಕ್ಷಕರು ಮತ್ತು ಅಬಕಾರಿ ಉಪ ನಿರೀಕ್ಷಕರುಗಳು ಹಣಕಾಸಿನ ದುರುಪಯೋಗ ಮಾಡಿಕೊಂಡಿರುವುದಿಲ್ಲ ಮತ್ತು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ನ್ನು ಉಲ್ಲಂಘಿಸಿರುವುದಿಲ್ಲ. ಪಿಡಬ್ಲ್ಯೂ–1 ಸಾಕ್ಷಿಯು ಆಡಿಟ್ ವರದಿಯಲ್ಲಿ ಸರ್ಕಾರಿ ಖಜಾನೆಗೆ ಹಣ ಸಂದಾಯ ಮಾಡಲು ಉಂಟಾಗಿರುವ ವಿಳಂಬದ ದಿನಗಳನ್ನು ಲೆಕ್ಕಹಾಕಿ ನಮೂದಿಸಿರುತ್ತಾರಾದರೂ, ವಾಸ್ತವವಾಗಿ ಸಾರಾಯಿ ಮಾರಾಟದ ಗುರಿಯನ್ನು ಸಾಧಿಸುವ ದೃಷ್ಟಿಯಿಂದ ಅಬಕಾರಿ ನಿರೀಕ್ಷಕರು ಮತ್ತು ಅಬಕಾರಿ ಉಪ ನಿರೀಕ್ಷಕರುಗಳು ವಾಸ್ತವವಾಗಿ ಹಣವನ್ನು ಪಡೆಯುವುದಕ್ಕೆ ಮುಂಚಿತವಾಗಿಯೇ ಮುಂಗಡ ನಗದು ರಸೀದಿಗಳನ್ನು ನೀಡಿರುತ್ತಾರೆಂದೂ, ನಂತರದಲ್ಲಿ ರಸೀದಿಗಳ ಹಣವನ್ನು ಸಂಗ್ರಹ ಮಾಡಿಕೊಂಡಿರುತ್ತಾರೆಂದು ಆಪಾದಿತರು ತಿಳಿಸಿದ್ದಾರೆ. ಈ ವಿಷಯವು ಪಿಡಬ್ಲ್ಯೂ–1 ಸಾಕ್ಷಿಯು ತಪಾಸಣೆ ನಡೆಸಿದಾಗಲೇ ತಮ್ಮ ಗಮನಕ್ಕೆ ಬಂದಿದ್ದು, ಗಮನಕ್ಕೆ ಬಂದ ನಂತರ ಅಬಕಾರಿ ನಿರೀಕ್ಷಕರಿಗೆ ಬಾಕಿ ಇರುವ ಹಣವನ್ನು ವಸೂಲು ಮಾಡಲು ಇಎಕ್ಸ್.ಡಿ–33 ಮತ್ತು ಡಿ–34 ಪತ್ರಗಳನ್ನು ಬರೆದಿರುವುದಾಗಿ ಆಪಾದಿತರು ಹೇಳಿದ್ದಾರೆ. ಆಪಾದಿತರು ಗುತ್ತಿಗೆದಾರರ ಮೇಲೆ ಸಹ ಒತ್ತಡ ಹೇರಿ ಸಂಪೂರ್ಣ ಬಾಕಿ ಹಣವನ್ನು ವಸೂಲು ಮಾಡಿರುವುದಾಗಿಯೂ ತಿಳಿಸಿದ್ದಾರೆ. ಅಬಕಾರಿ ನಿರೀಕ್ಷಕರು ಹಣ ಸಂಗ್ರಹಿಸದೇ ರಸೀದಿಗಳನ್ನು ನೀಡಿರುವ ಕ್ರಮವು ನಿಯಮಗಳ ಪ್ರಕಾರ ಕಟ್ಟುನಿಟ್ಟಾಗಿ

ತಪ್ಪಾದ ಕ್ರಮವಾಗಿರುತ್ತದಾದರೂ, ರಾಜ್ಯದ ರಾಜಸ್ವದ ಹಿತದೃಷ್ಟಿಯಿಂದ ಸಾರಾಯಿ ಮಾರಾಟದ ಗುರಿ ಸಾಧಿಸುವ ಸಲುವಾಗಿ ಈ ರೀತಿಯ ಕ್ರಮವನ್ನು ಅನುಸರಿದ್ದಾರೆ. ಅಪಾದಿತರ ಸಾಕ್ಷ್ಯ ಮತ್ತು ಡಿ–33 ಮತ್ತು ಡಿ–34 ದಾಖಲೆಗಳ ಪ್ರಕಾರ ಸಂಪೂರ್ಣ ಹಣವನ್ನು ವಸೂಲು ಮಾಡಿದ್ದಾರೆ. ಆದುದರಿಂದ ವಾಸ್ತವವಾಗಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ರ ಉಲ್ಲಂಘನೆ ಆಗಿರುವುದಿಲ್ಲ. ವಾಸ್ತವವಾಗಿ ಹಣ ಸಂಗ್ರಹಿಸಿದ್ದರೆ ಮತ್ತು ಅಂತಹ ಹಣವನ್ನು ಎರಡು ದಿನಗಳ ಒಳಗಾಗಿ ಖಜಾನೆಗೆ ಸಂದಾಯ ಮಾಡಿಲ್ಲದಿದ್ದಲ್ಲಿ ಈ ಉಪಬಂಧದ ಉಲ್ಲಂಘನೆ ಆಗುತ್ತಿತ್ತು. ಆದುದರಿಂದ ಆಪಾದಿತರು ಆರೋಪ–4ರಲ್ಲಿ ತಿಳಿಸಿರುವಂತೆ ಯಾವುದೇ ದುರ್ನಡತೆ ಅಥವಾ ನಿರ್ಲಕ್ಷ್ಯತೆ ಎಸಗಿಲ್ಲ. ಆರೋಪ–4ನ್ನು ಆಪಾದಿತರ ವಿರುದ್ಧ ಸಂಶಯಾತೀತವಾಗಿ ಸಾಬೀತು ಮಾಡಲಾಗಿಲ್ಲ]

**ರೋಹಿದಾಸ್ ನಾಯಕ್, ಅಬಕಾರಿ ಉಪ ಆಯುಕ್ತರು.**

**[ಆರೋಪ –1ಕ್ಕೆ ಸಂಬಂಧಿಸಿದಂತೆ:–** ಮಂಡನಾಧಿಕಾರಿಯು ವಿಚಾರಣೆ ಸಂ.1:2006–07ರಲ್ಲಿ ಮೂಲ ಪತ್ರವ್ಯವಹಾರಗಳು, ನಗದು ರಸೀದಿಗಳು, ನಗದು ಪುಸ್ತಕಗಳು ಇತ್ಯಾದಿಗಳನ್ನು ಹಾಜರುಪಡಿಸಿದ್ದು ಆರೋಪಪರ ಸಾಕ್ಷಿ–1 ಇವರು ವಿಚಾರಣೆಯಲ್ಲಿ ಸಾಕ್ಷ್ಯ ದಾಖಲಿಸಿ ಇಎಕ್ಸ್‌ಪಿ–1 ರಿಂದ ಇಎಕ್ಸ್‌ಪಿ–37ರವರೆಗಿನ ದಾಖಲೆಗಳನ್ನು ಹಾಜರುಪಡಿಸಿ ಗುರುತಿಸಿರುತ್ತಾರೆ. ಈ ಆಪಾದಿತರಿಗೆ ಸಂಬಂಧಿಸಿದ ವಿಚಾರಣೆಯಲ್ಲಿ ಸದರಿ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಜರುಪಡಿಸಿದ್ದಾರೆ. ಆರೋಪಪರ ಸಾಕ್ಷಿ–1 ಇವರು ಅಬಕಾರಿ ಆಯಕ್ತರ ನಿರ್ದೇಶನದ ಮೇರೆಗೆ ಶಿವಮೊಗ್ಗ ಕಛೇರಿಗೆ ಮೇ 2003ರಲ್ಲಿ ಭೇಟಿ ನೀಡಿ 2001–02 ಮತ್ತು 2002–03ನೇ ಸಾಲುಗಳ ಎಲ್ಲಾ ಸಂಬಂಧಪಟ್ಟ ದಾಖಲೆಗಳನ್ನು ತಪಾಸಣೆ ನಡೆಸಿ ವರದಿ ಸಲ್ಲಿಸಿರುವುದಾಗಿಯೂ, ಸದರಿ ವರದಿಯು ಇಎಕ್ಸ್‌ಪಿ–1 ಆಗಿರುತ್ತದೆಂದು ಸಾಕ್ಷ್ಯ ನೀಡಿದ್ದಾರೆ. ಆಪಾದಿತರು ಇಎಕ್ಸ್‌ಪಿ–1 ವರದಿಯಲ್ಲಿ ಒಳಗೊಂಡಿರುವ ಅಂಶಗಳು ನಿಜವಿರುತ್ತದೆಂದು ಸಾಕ್ಷ್ಯ ನುಡಿದಿದ್ದಾರೆ. ಆಪಾದಿತರು ಇಎಕ್ಸ್‌ಪಿ–1ರ ಬಗ್ಗೆ ತಕರಾರು ಎತ್ತಿರುವುದಿಲ್ಲ. ಆದರೆ, ಆಪಾದಿತರು ತಮ್ಮ ಸಾಕ್ಷ್ಯ ನುಡಿಯುವಾಗ, 1–8–2001 ರಿಂದ 30–06–2003ರವರೆಗೆ ಶಿವಮೊಗ್ಗ ಜಿಲ್ಲೆಯ ಅಬಕಾರಿ ಉಪ ಆಯುಕ್ತರಾಗಿ ಕಾರ್ಯನಿರ್ವಹಿಸಿರುವುದಾಗಿಯೂ, ಮಳೆಯ ವೈಫಲ್ಯದಿಂದ, ನೀರಾ ತಯಾರಿಸುವ ರೈತ ಚಳುವಳಿಯ ಕಾರಣದಿಂದ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ಸಿವಿಲ್ ನ್ಯಾಯಾಧೀಶರು ಮತ್ತು ಜೆಎಂಎಫ್‌ಸಿ, ಶಿಕಾರಿಪುರ ಇವರ ನ್ಯಾಯಾಲಯದಲ್ಲಿ ಮೂಲದಾವೆ ಸಂ:22:2002ನ್ನು ದಾಖಲು ಮಾಡಿ, ಗುತ್ತಿಗೆ ಹಣದ ವಸೂಲಾತಿಗೆ ದಿನಾಂಕ 16–03–2002ರಂದು ತಡೆಯಾಜ್ಞೆ ಪಡೆದಿದ್ದರೆಂದೂ, ಇದರಿಂದಾಗಿ ಸಾಕಷ್ಟು ಪ್ರಯತ್ನಗಳನ್ನು ಮಾಡಿದ್ದರೂ ಸಹ, ಜಿಲ್ಲೆಯ ಉಳಿದ ತಾಲ್ಲೂಕುಗಳ ಸಾರಾಯಿ ಗುತ್ತಿಗೆ ಹಣವನ್ನು ಸಹ ವಸೂಲು ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿದ್ದಾರೆ. ಆದಾಗ್ಯೂ 8,20,869ಗಳನ್ನು ವಸೂಲು ಮಾಡಿದ್ದು ದಿನಾಂಕ 16–07–2003ರಂದು ಪಾವತಿಸಿರುವ ರೂ.63.00,000 ಲಕ್ಷಗಳ ಚಲನಿನಲ್ಲಿ ಈ ಮೊತ್ತವು ಒಳಗೊಂಡಿರುತ್ತದೆ. ಈ ಸಂಬಂಧ ಚಲನ್ ಪ್ರತಿಯು ಇಎಕ್ಸ್‌ಡಿ–2 ಎಂಬುದಾಗಿ ಗುರುತಿಸಿದ್ದಾರೆ. ಗುತ್ತಿಗೆ ಹಣದ ಬಾಕಿ ವಸೂಲಾತಿಗಾಗಿ ಗುತ್ತಿಗೆದಾರರಿಗೆ ಮೆಮೋಗಳನ್ನು ಹೊರಡಿಸಿ ಅವುಗಳ ಪ್ರತಿಗಳನ್ನು ಸಂಬಂಧಪಟ್ಟ ಅಬಕಾರಿ ನಿರೀಕ್ಷಕರರಿಗೆ ಕಳುಹಿಸಿ ಗುತ್ತಿಗೆ ಹಣದ ಬಾಕಿ ವಸೂಲಾತಿ ಸೂಚನೆ ನೀಡಲಾಗಿದೆಯೆಂದು ತಿಳಿಸಿ, ಈ ಬಗ್ಗೆ ಇಎಕ್ಸ್‌ಡಿ–3 ರಿಂದ ಡಿ6 ದಾಖಲೆಗಳನ್ನು ಗುರುತಿಸಿದ್ದಾರೆ. ತಮ್ಮ ನಿರ್ದೇಶನದ ಮೇರೆಗೆ ವೆಂಕಟೇಶ್ ಎಂಬ ಅಬಕಾರಿ ಉಪ ನಿರೀಕ್ಷಕರು ಗುತ್ತಿಗೆದಾರರಾದ ಶಿವಪ್ರಕಾಶ ಇವರನ್ನು ಸಂಪರ್ಕಿಸಿ ಬಾಕಿ ಇರುವ ಗುತ್ತಿಗೆ ಹಣದ ಪಾವತಿಗಾಗಿ ಒತ್ತಾಯಿಸಿ ಅವರಿಂದ ಮುದ್ರಾಂಕ ಪತ್ರದ ಮೇಲೆ ಮುಚ್ಚಳಿಕೆ ಪತ್ರ ಬರೆಸಿಕೊಂಡಿರುತ್ತಾರೆ. ಗುತ್ತಿಗೆ ಹಣದ ಬಾಕಿ ವಸೂಲಾತಿಗಾಗಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರಿಗೆ ಮತ್ತು ಜಿಲ್ಲಾಧಿಕಾರಿಗಳು, ಅನಂತಪುರ ಜಿಲ್ಲೆ ಇವರಿಗೆ ಪತ್ರಗಳನ್ನು ಬರೆದಿರುವುದಾಗಿ ತಿಳಿಸಿದ್ದಾರೆ. ಈ ಬಗ್ಗೆ ಇಎಕ್ಸ್‌ಡಿ–8 ರಿಂದ 11 ಮತ್ತು ಇಎಕ್ಸ್‌ಡಿ–14 ದಾಖಲೆಗಳನ್ನು ಗುರುತಿಸಿದ್ದಾರೆ.

ದಿನಾಂಕ 22–05–2003 ರಂದು ಇದ್ದಂತೆ ರೂ.2,61,34,293–00ಗಳು ಬಾಕಿ ಉಳಿದಿತ್ತೆಂಬುದನ್ನು ಆಪಾದಿತರು ಒಪ್ಪುತ್ತಾರೆ. ಆ ಪೈಕಿ ಈ ಆಪಾದಿತರು ರೂ.8,20,869–00 ಮತ್ತು ರೂ.27,00,000–00ಗಳನ್ನು ವಸೂಲು ಮಾಡಿರುವುದು ಮತ್ತು ರೂ.8,01,100–00ಗಳಿಗೆ ಗುತ್ತಿಗೆದಾರರಿಂದ ಮುಚ್ಚಳಿಕೆ ಪಡೆದಿರುವುದು ಇವುಗಳ ಬಗ್ಗೆ ಮಂಡನಾಧಿಕಾರಿಯವರು ತಕರಾರು ವ್ಯಕ್ತಪಡಿಸಿಲ್ಲ. ಮಂಡನಾಧಿರಿಕಾಯವರ ವಾದವೆಂದರೆ ಆಪಾದಿತರು ಮೂಲದಾವೆ 22:2002ರಲ್ಲಿ ಅಂತಹ ದಾವೆಗೆ ಕಾನೂನಿನಲ್ಲಿ ಅವಕಾಶವಿಲ್ಲವೆಂಬುದಾಗಿ ತಿಳಿಸಿ ತಡೆಯಾಜ್ಞೆಯನ್ನು ತೆರವುಗೊಳಿಸಲು ಯಾವುದೇ ಕ್ರಮಗಳನ್ನು ಕೈಗೊಂಡಿಲ್ಲವೆಂಬುದಾಗಿದೆ. ಸಾಮಾನ್ಯವಾಗಿ ಇಂತಹ ದಾವೆಗಳಲ್ಲಿ ಇಲಾಖಾ ಮುಖ್ಯಸ್ಥರು ಆಕ್ಷೇಪಣೆಗಳನ್ನು ತಯಾರಿಸಿ ಸರ್ಕಾರಿ ವಕೀಲರ ಮೂಲಕ ನ್ಯಾಯಾಲಯದ ಮುಂದೆ ಸಲ್ಲಿಸುತ್ತಾರೆ. ಸರ್ಕಾರಿ ವಕೀಲರು ನ್ಯಾಯಾಲಯದಲ್ಲಿ ಪ್ರಕರಣ ನಡೆಸುತ್ತಾರೆ. ಸರ್ಕಾರಿ ವಕೀಲರು ತಡೆಯಾಜ್ಞೆ ತೆರವುಗೊಳಿಸಲು ಸಾಕಷ್ಟು ಪ್ರಯತ್ನಪಟ್ಟರೂ, ನ್ಯಾಯಾಲಯಗಳಲ್ಲಿ ಕಾರ್ಯಒತ್ತಡದಿಂದಾಗಿ ದಾವೆಗಳನ್ನು ಬೇಗನೆ ಕೈಗೆತ್ತಿಕೊಳ್ಳಲು ಸಾಧ್ಯವಾಗುವುದಿಲ್ಲವೆಂಬುದು ಸಾಮಾನ್ಯವಾದ ಅನುಭವವಾಗಿರುತ್ತದೆ. ಆದ್ದರಿಂದ ತಡೆಯಾಜ್ಞೆಯು ದೀರ್ಘಕಾಲದವರೆಗೆ ಮುಂದುವರೆದ ಕಾರಣದಿಂದ ಬಾಕಿ ಗುತ್ತಿಗೆ ಹಣವನ್ನು ವಸೂಲು ಮಾಡಲು ಸಾಧ್ಯವಾಗದಿರುವುದಕ್ಕೆ ಆಪಾದಿತರನ್ನು ಗುರಿಪಡಿಸಲಾಗದು. ಆಪಾದಿತರು ನೀಡಿರುವ ಮೌಖಿಕ ಸಾಕ್ಷ್ಯ ಮತ್ತು ಹಾಜರುಪಡಿಸಿರುವ ದಾಖಲೆಗಳ ಕಾರಣದಿಂದ ಅಪಾದಿತರು ತಮ್ಮ ಕರ್ತವ್ಯಗಳನ್ನು ಸೂಕ್ತವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿದ್ದಾರೆಂದೂ, ಅವರು ಕರ್ತವ್ಯ ನಿರ್ಲಕ್ಷ್ಯತೆ ಎಸಗಿಲ್ಲವೆಂದೂ, ನ್ಯಾಯಾಲಯದ ತಡೆಯಾಜ್ಞೆಯಿಂದಾಗಿ ಸಾರಾಯಿ ಗುತ್ತಿಗೆ ಹಣ ವಸೂಲಾಗದಿರುವುದನ್ನು ಆಪಾದಿತರ ಸರ್ಕಾರಿ ನೌಕರನಿಗೆ ಸಲ್ಲದ ನಡತೆಯೆಂದು ಹೇಳಲು ಬರುವುದಿಲ್ಲವೆಂದು ವಾದಿಸಿದ್ದಾರೆ.

ಗುತ್ತಿಗೆದಾರರು ಆಯಾ ತಿಂಗಳ 10 ರಿಂದ 25ನೇ ದಿನಾಂಕದೊಳಗೆ ಗುತ್ತಿಗೆ ಹಣದ ಬಾಕಿ ಪಾವತಿಸಲು ತಪ್ಪಿದಾಗ, ಆಪಾದಿತರು ಕರ್ನಾಟಕ ಅಬಕಾರಿ ಸನ್ನದುಗಳ (ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 15(1)ರಡಿ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿತ್ತೆಂದು, ಈ ನಿಯಮವನ್ನು ಅಪಾದಿತರು ಉಲ್ಲಂಘಿಸಿದ್ದಾರೆಂದು ಆದ್ದರಿಂದ ಆರೋಪ–1 ಸಾಬೀತಾಗುವುದೆಂದು ಮಂಡನಾಧಿಕಾರಿಯು ವಾದ ಮಂಡಿಸಿದ್ದಾರೆ. ಆದರೆ ಈ ನಿಯಮದಡಿ ಗುತ್ತಿಗೆಯನ್ನು ರದ್ದುಪಡಿಸಲು ಜಿಲ್ಲೆಯ ಅಬಕಾರಿ ಉಪ ಆಯುಕ್ತರಿಗೆ ಅಧಿಕಾರವಿದ್ದರೂ, ಇಂತಹ ಕ್ರಮವು ಕೈಮೀರಿದ ಪರಿಸ್ಥಿತಿಯಲ್ಲಿ ಕೈಗೊಳ್ಳಲಾಗುವ ಕ್ರಮವಾಗಿರುತ್ತದೆ. ಶಿವಮೊಗ್ಗ ಜಿಲ್ಲೆಯಲ್ಲಿ ಬರಗಾಲ ಪರಿಸ್ಥಿತಿ ಉಂಟಾಗಿತ್ತು ಮತ್ತು ರೈತರು ನೀರಾ ಚಳುವಳಿ ನಡೆಸುತ್ತಿದ್ದರು ಅಲ್ಲದೇ ಶಿಕಾರಿಪುರ ಸಿವಿಲ್ ನ್ಯಾಯಾಲಯವು ನೀಡಿದ್ದ ತಡೆಯಾಜ್ಞೆಯು ದೀರ್ಘಕಾಲದವರೆಗೆ ಜಾರಿಯಲ್ಲಿತ್ತು. ಇಂತಹ ಸಂದರ್ಭಗಳಲ್ಲಿ ಆಪಾದಿತರು ನಿಯಮದಡಿ ಇರುವಂತೆ ಗುತ್ತಿಗೆ ರದ್ದುಪಡಿಸುವ ಕ್ರಮ ಕೈಗೊಳ್ಳಬೇಕಾಗಿತ್ತೆಂದು ನಿರೀಕ್ಷಿಸುವುದು ಸಾಧ್ಯವಿಲ್ಲ. ಸಾರಾಯಿ ಗುತ್ತಿಗೆ ಹಣದ ಬಾಕಿ ವಸೂಲು ಮಾಡಲು ಅಪಾದಿತರು ಸಾಧ್ಯವಿದ್ದ ಎಲ್ಲಾ ಕ್ರಮಗಳನ್ನು ಕೈಗೊಂಡಿರುತ್ತಾರೆ. ಆದುದರಿಂದ ನಿಯುಮ 15(1)ರನ್ವಯ ಅಧಿಕಾರ ಚಲಾಯಿಸಲು ವಿಫಲರಾಗಿರುವುದಕ್ಕೆ ಆಪಾದಿತರು ದೋಷಿಯೆಂಬ ಮಂಡನಾಧಿಕಾರಿಯವರ ನಿಲುವು ಬಲವಾದುದಲ್ಲ.

ಆರೋಪಪರ ಸಾಕ್ಷಿ-2 ಹೆಚ್.ಡಿ.ನಾಗರಾಜ ಇವರು ಸದರಿ ಅವಧಿಯಲ್ಲಿ ಅಬಕಾರಿ ಉಪ ಆಯುಕ್ತರ ಕಛೇರಿಯಲ್ಲಿ ಅಬಕಾರಿ ಉಪ ಅಧೀಕ್ಷಕರಾಗಿ ಕಾರ್ಯನಿರ್ವಹಿಸಿದ್ದು, ಸದರಿಯವರು ತಮ್ಮ ಸಾಕ್ಷ್ಯದಲ್ಲಿ ಶಿಸ್ತು ಪ್ರಾಧಿಕಾರದ ಆರೋಪವನ್ನು ಬಲಪಡಿಸುವ ಯಾವುದೇ ಹೇಳಿಕೆ ನೀಡಿರುವುದಿಲ್ಲ. ಬದಲಾಗಿ ಆಪಾದಿತರು ತಾಲ್ಲೂಕುಗಳ ಅಬಕಾರಿ ನಿರೀಕ್ಷಕರು ಮತ್ತು ಉಪ ನಿರೀಕ್ಷಕರಿಗೆ ಗುತ್ತಿಗೆದಾರರಿಂದ ಗುತ್ತಿಗೆ ಹಣದ ವಸೂಲಾತಿಗಾಗಿ ನಿರ್ದೇಶನಗಳನ್ನು ನೀಡುತ್ತಿದ್ದರು ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಎರಡೂ ಪಕ್ಷಗಳು ನೀಡಿರುವ ಸಾಕ್ಷ್ಯವನ್ನು ಪರಿಗಣಿಸಲಾಗಿ, ಶಿಸ್ತು ಪ್ರಾಧಿಕಾರದ ಆರೋಪದಂತೆ ಆಪಾದಿತರು ನಿಯಮ 15(1)ನ್ನು ಉಲ್ಲಂಘನೆ ಮಾಡಿದ್ದಾರೆ, ನಡತೆ ನಿಯಮಗಳ ನಿಯಮ 3ನ್ನು ಉಲ್ಲಂಘನೆ ಮಾಡಿದ್ದಾರೆಂಬುದಕ್ಕೆ ಯಾವುದೇ ಸಾಕ್ಷ್ಯವಿಲ್ಲವೆಂದೂ, ಆದುದರಿಂದ ಆರೋಪ-1 ಸಂಶಯಾತೀತವಾಗಿ ಸಾಬೀತಾಗಿರುವುದಿಲ್ಲ]

[**ಆರೋಪ-2ಕ್ಕೆ ಸಂಬಂಧಿಸಿದಂತೆಃ-** ಆರೋಪಪರ ಸಾಕ್ಷಿ1 ಇವರ ಸಾಕ್ಷ್ಯ ಮತ್ತು ಇಎಕ್ಸ್.ಪಿ-1 ದಾಖಲೆಯಿಂದ ಆರೋಪ-2ರಲ್ಲಿ ನಮೂದಿಸಿರುವಂತೆ ದಿನಾಂಕ 22-02-2005ರಂದು ಗುತ್ತಿಗೆ ಹಣವು ಬಾಕಿ ಇತ್ತೆಂಬುದು ಸಾಬೀತಾಗುತ್ತದೆ. ಇದನ್ನು ಆಪಾದಿತರು ನಿರಾಕರಿಸಿಲ್ಲ. ಆದರೆ, ಬಾಕಿ ಉಳಿದಿದ್ದ ಗುತ್ತಿಗೆ ಹಣ ಮತ್ತು ಬಡ್ಡಿಯನ್ನು ಗುತ್ತಿಗೆದಾರರು ನೀಡಿದ್ದ ಬ್ಯಾಂಕ್ ಗ್ಯಾರಂಟಿಯನ್ನು ನಗದೀಕರಿಸಿ ಪೂರ್ಣವಾಗಿ ವಸೂಲು ಮಾಡಲಾಗಿದೆಯೆಂದು ಆಪಾದಿತರು ಸಾಕ್ಷ್ಯದಲ್ಲಿ ಹೇಳಿದ್ದಾರೆ. ಈ ಬಗ್ಗೆ ಇಎಕ್ಸ್.ಡಿ-15 ರಿಂದ ಡಿ31ರ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಜರುಪಡಿಸಿರುವುದ್ದಾರೆ. ಇದನ್ನು ಮಂಡನಾಧಿಕಾರಿಯು ನಿರಾಕರಿಸಿರುವುದಿಲ್ಲ. ಈ ದಾಖಲೆಗಳನ್ನು ಶ್ರೀ ಕೆ.ಆರ್.ಗೌಡರ್, ಅಬಕಾರಿ ಅಧೀಕ್ಷಕರ ವಿರುದ್ಧದ ಮೊದಲನೇ ವಿಚಾರಣೆಯಲ್ಲಿ ನೋಡಿರುತ್ತೇನೆ. ಮಂಡನಾಧಿಕಾರಿಯು ನಿಯಮ 15(1)(ಸಿ)(iii)ರ ಅನ್ವಯ ಗುತ್ತಿಗೆದಾರರ ಗುತ್ತಿಗೆಯನ್ನು ರದ್ದುಪಡಿಸುವ ಬಗ್ಗೆ ನಿರ್ಧರಿಸಲು ವಿಫಲರಾಗಿ ಸದರಿ ನಿಯಮವನ್ನು ಉಲ್ಲಂಘಿಸಿದ್ದಾರೆಂಬ ವಾದವನ್ನು ಮಂಡಿಸಿದ್ದಾರೆ. ಇಂತಹ ಕ್ರಮವು ಕೈಮೀರಿದ ಪರಿಸ್ಥಿತಿಯಲ್ಲಿ ಕೊನೆಯ ಹಂತದಲ್ಲಿ ಕೈಗೊಳ್ಳವುದಾಗಿದ್ದು, ಇದರಿಂದ ಗುತ್ತಿಗೆ ಹಣದ ಬಾಕಿಯನ್ನು ವಸೂಲು ಮಾಡಲು ಯಾವುದೇ ಸಹಾಯವಾಗದೆಂಬುದಾಗಿ ವಾದ ಮಾಡಿದ್ದಾರೆ. ಆದಾಗ್ಯೂ ಬ್ಯಾಂಕ್ ಗ್ಯಾರಂಟಿಗಳನ್ನು ನಗದೀಕರಿಸಿ ಬಾಕಿ ಇದ್ದ ಎಲ್ಲಾ ಗುತ್ತಿಗೆ ಮೊತ್ತ ಮತ್ತು ಬಡ್ಡಿಯನ್ನು ವಸೂಲು ಮಾಡಲಾಗಿದೆಯೆಂದು ತಿಳಿಸಿದ್ದಾರೆ. ಲೆಕ್ಕತಪಾಸಣೆ ಮಾಡಿದ ಪಿಡಬ್ಲ್ಯೂ-1 ಸಾಕ್ಷಿಯು ಪಾಟೀಸವಾಲಿಗೆ ಉತ್ತರ ನೀಡಿದಾಗ, 2005ರಲ್ಲಿ ಸಹ ಸದರಿ ಕಛೇರಿಯ ಲೆಕ್ಕತಪಾಸಣೆ ಮಾಡಿರುವುದಾಗಿಯೂ, ಆದರೆ ಈ ಆರೋಪಕ್ಕೆ ಸಂಬಂಧಿಸಿದ ಬಾಕಿ ಮೊತ್ತವನ್ನು ಪೂರ್ಣವಾಗಿ ವಸೂಲು ಮಾಡಲಾಗಿದೆಯೇ ಅಥವಾ ಇಲ್ಲವೇ ಎಂಬುದು ತಮಗೆ ಜ್ಞಾಪಕವಿಲ್ಲವೆಂದು ಹೇಳಿಕೆ ನೀಡಿದ್ದಾರೆ. ಸದರಿ ಬಾಕಿ ಮೊತ್ತ ಅಥವಾ ಅದರ ಭಾಗಶಃ ಮೊತ್ತ ಈಗಲೂ ಬಾಕಿ ಉಳಿದಿದೆ ಎಂಬುದಕ್ಕೆ ಮಂಡನಾಧಿಕಾರಿಯು ಯಾವುದೇ ದಾಖಲೆಯನ್ನು ಹಾಜರುಪಡಿಸಿಲ್ಲ. ಆದ್ದರಿಂದ ಆಪಾದಿತರು ಯಾವುದೇ ಆರ್ಥಿಕ ನಷ್ಟವುಂಟು ಮಾಡಿಲ್ಲವೆಂಬುದಾಗಿ ನಿರ್ಣಯಕ್ಕೆ ಬಂದಿರುವುದಾಗಿ ವಿಚಾರಣಾಧಿಕಾರಿಯು ದಾಖಲಿಸಿದ್ದಾರೆ. ಆಪಾದಿತರು ಸೂಕ್ತವಾಗಿಯೇ ಕಾರ್ಯನಿರ್ವಹಿಸಿದ್ದು ದುರ್ನಡತೆ ಎಸಗಿರುವುದಿಲ್ಲವೆಂಬುದಾಗಿ ಕಂಡುಬಂದಿರುತ್ತದೆ. ಆದುದರಿಂದ ಆರೋಪ-2 ನಿಸ್ಸಂಶಯವಾಗಿ ರುಜುವಾತುಪಡಿಸಿರುವುದಿಲ್ಲ]

[**ಆರೋಪ-3ಕ್ಕೆ ಸಂಬಂಧಿಸಿದಂತೆಃ-** ಗುತ್ತಿಗೆದಾರರಾದ ಶ್ರೀ ಆರ್.ಎಸ್.ರಮೇಶರಾವ್ ಇವರು 30-09-2002 ರವರೆಗೆ ಬ್ಯಾಂಕ್ ಗ್ಯಾರಂಟಿಯನ್ನು ಇನ್‌ವೋಕ್ ಮಾಡದಂತೆ ಮನವಿ ಮಾಡಿದ್ದರಲ್ಲದೇ ಅದಕ್ಕೆ ಮುಂಚೆ ಬ್ಯಾಂಕ್ ಆಡಳಿತಕ್ಕೆ ಸಹ ಮನವಿ ಮಾಡಿದ್ದರು. ಗುತ್ತಿಗೆದಾರರ ಮತ್ತು ಆಪಾದಿತರು ಕೋರಿದ್ದ ಮೇರೆಗೆ ಬ್ಯಾಂಕ್‌ನವರು ಸಹ ಗ್ಯಾರಂಟಿಯನ್ನು ಇನ್‌ವೋಕ್ ಮಾಡಲು 30-09-2002ರವರೆಗೆ ಕಾಲಾವಕಾಶ ವಿಸ್ತರಿಸಿದ್ದರೆಂದು ಆಪಾದಿತರು ಹೇಳಿಕೆ ನೀಡಿದ್ದಾರೆ. ಮುಂದುವರೆದು, ಗುತ್ತಿಗೆದಾರರು 30-09-2002ಕ್ಕೆ ಮುಂಚೆ ಬಾಕಿ ಮೊತ್ತವನ್ನು ಪಾವತಿಸಲು ವಿಫಲರಾಗಿದ್ದರಿಂದ ಬ್ಯಾಂಕ್ ಗ್ಯಾರಂಟಿಯನ್ನು ಇನ್‌ವೋಕ್ ಮಾಡಿ ಸಾರಾಯಿ ಗುತ್ತಿಗೆ ಹಣದ ಸಂಪೂರ್ಣ ಬಾಕಿಯನ್ನು ಬಡ್ಡಿಸಹಿತ ವಸೂಲು ಮಾಡಲಾಗಿರುತ್ತದೆಂದು ಆಪಾದಿತರು ತಿಳಿಸಿದ್ದಾರೆ. ಇಎಕ್ಸ್.ಪಿ-2 ರಿಂದ ಪಿ-4 ಇದಕ್ಕೆ ಸಂಬಂಧಿಸಿದ ದಾಖಲೆಗಳಾಗಿರುತ್ತವೆಂದು ಆಪಾದಿತರು ಹೇಳಿದ್ದಾರೆ. ಶ್ರೀ ರಮೇಶರಾವ್ ಗುತ್ತಿಗೆದಾರರು ನೀಡಿದ್ದ ಮೂರನೇ ಬ್ಯಾಂಕ್ ಗ್ಯಾರಂಟಿಯನ್ನು ಇನ್‌ವೋಕ್ ಮಾಡಲು ಅಪಾದಿತರು ತಕ್ಷಣ ಕ್ರಮ ಕೈಗೊಳ್ಳಬೇಕಾಗಿತ್ತು ಸದರಿಯವರು ಬ್ಯಾಂಕ್ ಗ್ಯಾರಂಟಿಯ ಕಾಲಾವಕಾಶ ವಿಸ್ತರಿಸಲು ಕೋರಿ ಬ್ಯಾಂಕಿಗೆ ಪತ್ರ ಬರೆಯಬೇಕಾಗಿರಲಿಲ್ಲ ಎಂಬುದು ಒಪ್ಪತಕ್ಕದ್ದಾದರೂ, ಆದಾಗ್ಯೂ ಆಪಾದಿತರು ಗುತ್ತಿಗೆದಾರರಿಗೆ ಬಾಕಿ ಗುತ್ತಿಗೆ ಹಣ ಪಾವತಿಸಲು ನಿಯಮಮಾನುಸಾರವೇ 30-09-2002ರವರೆಗೆ ಕಾಲಾವಕಾಶ ನೀಡಿರುತ್ತಾರೆ. ಈ ರೀತಿ ಕಾನೂನು ರೀತ್ಯಾ ಕಾಲಾವಕಾಶ ನೀಡಿದ ಅವಧಿಯಲ್ಲಿ ಬಾಕಿ ಮೊತ್ತದ ಬಹುಭಾಗದ ಹಣ ವಸೂಲಾತಿಯಾಗಿರುವುದು ಇಎಕ್ಸ್‌ಪಿ-1 ದಾಖಲೆಯಿಂದ ಕಂಡುಬರುತ್ತದೆ. ಆದ್ದರಿಂದ ಆಪಾದಿತರು ಬ್ಯಾಂಕ್ ಗ್ಯಾರಂಟಿಯನ್ನು ಮುಂಚೆಯೇ ಇನ್‌ವೋಕ್ ಮಾಡದೇ ಯಾವುದೇ ನಿರ್ಲಕ್ಷ್ಯ ಅಥವಾ ದುರ್ನಡತೆ ಎಸಗಿಲ್ಲವೆಂದು ಕಂಡುಬರುತ್ತದೆ. ಕಾನೂನು ರೀತ್ಯ ನೀಡಲಾದ ಅವಧಿಯಲ್ಲಿ ಗುತ್ತಿಗೆ ಹಣದ ಬಾಕಿಯನ್ನು ಪೂರ್ತಿಯಾಗಿ ವಸೂಲು ಮಾಡಿದ್ದಾರೆ. ಹೀಗಾಗಿ ದಾಖಲಿಸಲಾಗಿರುವ ಸಾಕ್ಷ್ಯಗಳ ಮೇರೆಗೆ, ಆಪಾದಿತರು ನಡತೆ ನಿಯಮಗಳ ನಿಯಮ 3ರೊಂದಿಗೆ ಓದಲಾದಂತೆ ಕ.ಅ. (ಸಾರಾಯಿ ಚಿಲ್ಲರೆ ಮಾರಾಟ ಹಕ್ಕಿನ ಗುತ್ತಿಗೆ) ನಿಯಮಗಳ ನಿಯಮ 17ಬಿ ಅನ್ನು ಉಲ್ಲಂಘನೆ ಮಾಡಿರುವುದಿಲ್ಲ ಎಂಬುದಾಗಿ ಮತ್ತು ಆದ್ದರಿಂದ ಆರೋಪ-3ನ್ನು ಸಾಬೀತುಪಡಿಸಲಾಗಿಲ್ಲ]

[**ಆರೋಪ-4ಕ್ಕೆ ಸಂಬಂಧಿಸಿದಂತೆಃ-** ಈ ಆರೋಪಕ್ಕೆ ಸಂಬಂಧಿಸಿದಂತೆ ಸಂಬಂಧಿಸಿದ ಅಬಕಾರಿ ನಿರೀಕ್ಷಕರು ಮತ್ತು ಅಬಕಾರಿ ಉಪ ನಿರೀಕ್ಷಕರುಗಳು ಹಣಕಾಸಿನ ದುರುಪಯೋಗ ಮಾಡಿಕೊಂಡಿರುವುದಿಲ್ಲ ಮತ್ತು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ನ್ನು ಉಲ್ಲಂಘಿಸಿರುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ಹೇಳಬೇಕಾಗಿದೆ. ಪಿಡಬ್ಲ್ಯೂ-1 ಸಾಕ್ಷಿಯು ಆಡಿಟ್ ವರದಿಯಲ್ಲಿ ಸರ್ಕಾರಿ ಖಜಾನೆಗೆ ಹಣ ಸಂದಾಯ ಮಾಡಲು ಉಂಟಾಗಿರುವ ವಿಳಂಬದ ದಿನಗಳನ್ನು ಲೆಕ್ಕಹಾಕಿ ನಮೂದಿಸಿರುತ್ತಾರಾದರೂ, ವಾಸ್ತವವಾಗಿ ಸಾರಾಯಿ ಮಾರಾಟದ ಗುರಿಯನ್ನು ಸಾಧಿಸುವ ದೃಷ್ಟಿಯಿಂದ ಅಬಕಾರಿ ನಿರೀಕ್ಷಕರು ಮತ್ತು ಅಬಕಾರಿ ಉಪ ನಿರೀಕ್ಷಕರುಗಳು ವಾಸ್ತವವಾಗಿ ಹಣವನ್ನು ಪಡೆಯುವುದಕ್ಕೆ ಮುಂಚಿತವಾಗಿಯೇ ಮುಂಗಡ ನಗದು ರಸೀದಿಗಳನ್ನು ನೀಡಿರುತ್ತಾರೆಂದೂ, ನಂತರದಲ್ಲಿ ರಸೀದಿಗಳ ಹಣವನ್ನು ಸಂಗ್ರಹ ಮಾಡಿಕೊಂಡಿರುತ್ತಾರೆಂದು ಅಪಾದಿತರು ತಿಳಿಸಿದ್ದಾರೆ. ಈ ವಿಷಯವು ಪಿಡಬ್ಲ್ಯೂ-1 ಸಾಕ್ಷಿಯು ತಪಾಸಣೆ ನಡೆಸಿದಾಗಲೇ ತಮ್ಮ ಗಮನಕ್ಕೆ ಬಂದಿದ್ದು, ಗಮನಕ್ಕೆ ಬಂದ ನಂತರ ಅಬಕಾರಿ ನಿರೀಕ್ಷಕರಿಗೆ ಬಾಕಿ ಇರುವ ಹಣವನ್ನು ವಸೂಲು ಮಾಡಲು ಇಎಕ್ಸ್.ಡಿ-32 ಮತ್ತು ಡಿ-33 ಪತ್ರಗಳನ್ನು ಬರೆದಿರುವುದಾಗಿ ಅಪಾದಿತರು ಹೇಳಿದ್ದಾರೆ. ಆಪಾದಿತರು ಗುತ್ತಿಗೆದಾರರ ಮೇಲೆ ಸಹ ಒತ್ತಡ ಹೇರಿ ಸಂಪೂರ್ಣ ಬಾಕಿ ಹಣವನ್ನು ವಸೂಲು ಮಾಡಿರುವುದಾಗಿಯೂ ತಿಳಿಸಿದ್ದಾರೆ. ಅಬಕಾರಿ ನಿರೀಕ್ಷಕರು ಹಣ ಸಂಗ್ರಹಿಸದೇ ರಸೀದಿಗಳನ್ನು ನೀಡಿರುವ ಕ್ರಮವು ನಿಯಮಗಳ ಪ್ರಕಾರ ಕಟ್ಟುನಿಟ್ಟಾಗಿ ತಪ್ಪಾದ ಕ್ರಮವಾಗಿರುತ್ತದಾದರೂ, ರಾಜ್ಯದ ರಾಜಸ್ವದ ಹಿತದೃಷ್ಟಿಯಿಂದ ಸಾರಾಯಿ ಮಾರಾಟದ ಗುರಿ ಸಾಧಿಸುವ ಸಲುವಾಗಿ ಈ ರೀತಿಯ ಕ್ರಮವನ್ನು ಅನುಸರಿದ್ದಾರೆ. ಆಪಾದಿತರ ಸಾಕ್ಷ್ಯ ಮತ್ತು ಡಿ-32 ಮತ್ತು ಡಿ-33 ದಾಖಲೆಗಳ ಪ್ರಕಾರ ಸಂಪೂರ್ಣ ಹಣವನ್ನು ವಸೂಲು

ಮಾಡಿದ್ದಾರೆ. ಆದುದರಿಂದ ವಾಸ್ತವವಾಗಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ರ ಉಲ್ಲಂಘನೆ ಆಗಿರುವುದಿಲ್ಲ. ವಾಸ್ತವವಾಗಿ ಹಣ ಸಂಗ್ರಹಿಸಿದ್ದರೆ ಮತ್ತು ಅಂತಹ ಹಣವನ್ನು ಎರಡು ದಿನಗಳ ಒಳಗಾಗಿ ಖಜಾನೆಗೆ ಸಂದಾಯ ಮಾಡಿಲ್ಲದಿದ್ದಲ್ಲಿ ಈ ಉಪಬಂಧದ ಉಲ್ಲಂಘನೆ ಆಗುತ್ತಿತ್ತು. ಆದುದರಿಂದ ಅಪಾದಿತರು ಆರೋಪ–4ರಲ್ಲಿ ತಿಳಿಸಿರುವಂತೆ ಯಾವುದೇ ದುರ್ನಡತೆ ಅಥವಾ ನಿರ್ಲಕ್ಷ್ಯತೆ ಎಸಗಿಲ್ಲ. ಆರೋಪ–4ನ್ನು ಆಪಾದಿತರ ವಿರುದ್ಧ ಸಂಶಯಾತೀತವಾಗಿ ಸಾಬೀತು ಮಾಡಲಾಗಿಲ್ಲ]

[ ವಿಚಾರಣಾ ವರದಿಯನ್ನು ದಾಖಲೆಯೊಡನೆ ಪರಿಶೀಲಿಸಲಾಗಿದೆ. ಸರ್ವೋಚ್ಚ ನ್ಯಾಯಾಲಯವು ಸ್ಟೇಟ್ ಆಫ್ ರಾಜಸ್ತಾನ್ ವರ್ಸಸ್ ಬಿ.ಕೆ.ಮೀನಾ ಮತ್ತು ಇತರರ ಪ್ರಕರಣದಲ್ಲಿ (1990)6 ಸುಪ್ರೀಂಕೋರ್ಟ್ ಕೇಸಸ್ 417) ನ್ಯಾಯಾಂಗ ನಡವಳಿ ಹಾಗೂ ಅರೆನ್ಯಾಯಾಂಗ ನಡವಳಿಗಳಲ್ಲಿ ಪರಿಗಣಿಸಲಾಗುವ ಸಾಕ್ಷ್ಯಗಳ ತೀವ್ರತೆಯು ಬೇರೆ ಬೇರೆ ಇರುವ ಕಾರಣ ನ್ಯಾಯಾಂಗ ನಡವಳಿಗೆ ಸಮಾನಾಂತರವಾಗಿ ಇಲಾಖಾ ನಡವಳಿಗಳನ್ನು ಜರುಗಿಸಬಹುದೆಂದು ನಿರ್ಣಯಿಸಿದೆ. ನ್ಯಾಯಾಲಯದ ನಿರ್ಣಯವು ಮೇಲಿನಂತರಲಾಗಿ ಆರೋಪಗಳು ಸಂಶಯಾತೀತವಾಗಿ ಸಾಭೀತುಪಡಿಸಬೇಕೆಂಬ ನ್ಯಾಯಾಂಗ ನಡವಳಿಯ ತತ್ವವನ್ನು ಅರೆ ನ್ಯಾಯಾಂಗ ನಡವಳಿಯಾದ ಇಲಾಖಾ ವಿಚಾರಣೆಯಲ್ಲಿ ಅನ್ವಯಿಸಿ ನಿರ್ಣಯ ನೀಡುವುದು ಅಂಗೀಕಾರ್ಹವಲ್ಲ ಈ ಅಂಶ ಕುರಿತಂತೆ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಲಾಗುವುದಿಲ್ಲ.

[ವಿಚಾರಣಾಧಿಕಾರಿಯವರು ಎಲ್ಲಾ ಆರೋಪಗಳನ್ನು beyond reasonable doubts ರುಜುವಾತುಪಡಿಸಿಲ್ಲವೆಂಬುದಾಗಿ ವಿಚಾರಣಾ ವರದಿಯಲ್ಲಿ ನಮೂದಿಸಿದ್ದಾರೆ. ಇಲಾಖಾ ವಿಚಾರಣೆಗಳಲ್ಲಿ ರುಜುವಾತಿನ ಮಟ್ಟಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಆರೋಪವು ಸಂದೇಹಕ್ಕೆ ಅವಕಾಶವಿಲ್ಲದಂತೆ ರುಜುವಾತಾಗಬೇಕಾದ ಅಗತ್ಯತೆ ಇಲ್ಲ, ಆರೋಪವು ರುಜುವಾತಾಗಲು ಪೂರಕವಾದ ಸಂಭಾವ್ಯ ಸಾಕ್ಷ್ಯವಿದ್ದರೆ ಸಾಕು. ಆದುದರಿಂದ ವಿಚಾರಣಾಧಿಕಾರಿಯವರು ಆರೋಪಗಳು beyond reasonable doubts ರುಜುವಾತಾಗಿಲ್ಲವೆಂದು ಹೇಳಿರುವುದು ಸಮಂಜಸವಾಗಿ ಕಂಡುಬರುವುದಿಲ್ಲ.

ಮೊದಲನೇ ಆರೋಪವು 2001–02ನೇ ಸಾಲಿನಲ್ಲಿ ಶಿವಮೊಗ್ಗ ಜಿಲ್ಲೆಯ ತಾಲ್ಲೂಕುಗಳ ಸಾರಾಯಿ ಗುತ್ತಿಗೆಗಳ ಸಂಬಂಧದಲ್ಲಿ ಗುತ್ತಿಗೆದಾರರಿಂದ ವಸೂಲು ಮಾಡಬೇಕಾಗಿದ್ದ ಗುತ್ತಿಗೆ ಹಣವನ್ನು ನಿಗದಿತ ಸಮಯದಲ್ಲಿ ವಸೂಲು ಮಾಡಲು ವಿಫಲರಾಗಿ ದಿನಾಂಕ: 22–05–2003ರಂದು ಇದ್ದಂತೆ ಗುತ್ತಿಗೆ ಹಣ ಮತ್ತು ಬಡ್ಡಿ ಸೇರಿದಂತೆ ರೂ.2,61,34,293–00ಗಳನ್ನು ಬಾಕಿ ಉಳಿಸಿ ಕರ್ತವ್ಯಲೋಪವೆಸಗಿದ್ದಾರೆ ಎಂಬುದಾಗಿದೆ. ದಿನಾಂಕ 20–05–2003ರಂದು ಗುತ್ತಿಗೆ ಹಣ ಮತ್ತು ಅದರ ಮೇಲಿನ ಬಡ್ಡಿ ಸೇರಿದಂತೆ ಇಷ್ಟು ಮೊತ್ತದ ಬಾಕಿ ಉಳಿದಿತ್ತು ಎಂಬುದನ್ನು ವಿಚಾರಣಾಧಿಕಾರಿಗಳು ಒಪ್ಪುತ್ತಾರೆ. ಆಪಾದಿತರು ತದನಂತರದಲ್ಲಿ ಅಂದರೆ ದಿನಾಂಕ:16–07–2003ರಂದು ರೂ.8,20,869–00ಗಳು ಮತ್ತು 21–10–2003ರಂದು ರೂ.27.00ಲಕ್ಷಗಳನ್ನು ವಸೂಲು ಮಾಡಿರುವುದಾಗಿ ವಿಚಾರಣೆಯಲ್ಲಿ ತೋರಿಸಿದ್ದಾರೆ. ಈ ವಸೂಲಾತಿಗಳು ತದನಂತರದಲ್ಲಿ ಮಾಡಲಾಗಿರುವ ವಸೂಲಾತಿಗಳಾಗಿವೆ. ಈ ಮೊತ್ತಗಳನ್ನು ಗಣನೆಗೆ ತೆಗೆದುಕೊಂಡಾಗ್ಯೂ ಬಹುಪಾಲು ಮೊತ್ತ ರೂ.2,26,13,424–00ಗಳು ವಸೂಲಾಗದೇ ಉಳಿದಿರುವುದು ಕಂಡುಬರುತ್ತದೆ. ರೂ.8,01,100–00ಗಳನ್ನು ಪಾವತಿಸುವುದಾಗಿ ಗುತ್ತಿಗೆದಾರರಿಂದ ಮುದ್ರಾಂಕ ಪತ್ರದ ಮೇಲೆ ಮುಚ್ಚಳಿಕೆ ಬರೆಯಿಸಿಕೊಂಡಿರುವ ಕ್ರಮವು ಕೇವಲ ತೋರಿಕೆಯ ಕ್ರಮವಾಗಿದೆಯೇ ಹೊರತು ಅದರಿಂದ ಯಾವುದೇ ಮೊತ್ತ ವಸೂಲಾದಂತಾಗುವುದಿಲ್ಲ. ಗುತ್ತಿಗೆದಾರರು ಗುತ್ತಿಗೆ ಕರಾರಿನ ಮೇರೆಗೆ ಪ್ರತಿ ತಿಂಗಳು ಗುತ್ತಿಗೆ ಪಾವತಿಸಲು ಬದ್ಧರಾಗಿದ್ದು, ಅದರನ್ವಯ ಕ್ರಮ ಕೈಗೊಳ್ಳದೇ ಮತ್ತೊಂದು ಮುಚ್ಚಳಿಕೆ ಬರೆಯಿಸಿಕೊಳ್ಳುವ ಕ್ರಮದಿಂದ ಯಾವುದೇ ಪ್ರಯೋಜನ ಇಲ್ಲ ಆರೋಪಿತರು ಸರ್ಕಾರಕ್ಕೆ ಬರಬೇಕಾದ ಗುತ್ತಿಗೆ ಹಣವನ್ನು ವಸೂಲು ಮಾಡಿದ್ದಾರೆಯೇ? ಆ ಮೂಲಕ ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದಾರೆಯೇ ಎಂಬುದು ಮುಖ್ಯವಾಗುತ್ತದೆ.

ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ಗುತ್ತಿಗೆ ಹಣದ ವಸೂಲಾತಿಯನ್ನು ವಿರೋಧಿಸಿ ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದಿದ್ದರು. ತಡೆಯಾಜ್ಞೆಯು ದೀರ್ಘ ಅವಧಿಯವರೆಗೆ ಜಾರಿಯಲ್ಲಿತ್ತು. ಇದರಿಂದಾಗಿ ಇತರೆ ತಾಲ್ಲೂಕುಗಳ ಗುತ್ತಿಗೆ ಹಣವನ್ನು ಸಹ ವಸೂಲು ಮಾಡಲು ಎಲ್ಲಾ ಅಗತ್ಯ ಪ್ರಯತ್ನಗಳನ್ನು ಮಾಡಿಯೂ ಸಾಧ್ಯವಾಗಿಲ್ಲವೆಂಬುದಾಗಿ ಆಪಾದಿತರು ಮಂಡಿಸಿರುವ ರಕ್ಷಣಾ ವಾದವನ್ನು ವಿಚಾರಣಾಧಿಕಾರಿಯವರು ಅವಲಂಬಿಸಿ ರುಜುವಾತಾಗಿಲ್ಲವೆಂಬ ನಿರ್ಣಯಕ್ಕೆ ಬಂದಿದ್ದಾರೆ. ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ಪಡೆದ ತಡೆಯಾಜ್ಞೆಯು ಕಾನೂನು ಸಮ್ಮತವಾಗಿ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರಿಗೆ ಮಾತ್ರ ಅನ್ವಯವಾಗುತ್ತಿದ್ದು, ಅದನ್ನು ಇತರೆ ತಾಲ್ಲೂಕುಗಳ ಗುತ್ತಿಗೆದಾರರಿಗೂ ಅನ್ವಯಿಸಲು ಅವಕಾಶವಿಲ್ಲ. ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ಪಡೆದ ತಡೆಯಾಜ್ಞೆಯನ್ನು ತೆರವುಗೊಳಿಸಲು ಇಲಾಖಾ ಮುಖ್ಯಸ್ಥರು ಕ್ರಮ ಕೈಗೊಳ್ಳಬೇಕಾಗಿತ್ತು, ಸರ್ಕಾರಿ ವಕೀಲರು ಪ್ರಯತ್ನಗಳನ್ನು ಮಾಡಿದರೂ ನ್ಯಾಯಾಲಯದಲ್ಲಿ ಕಾರ್ಯಒತ್ತಡದಿಂದಾಗಿ ಪ್ರಕರಣ ಕೈಗೆತ್ತಿಕೊಳ್ಳಲು ವಿಳಂಬವಾಗುವುದು ಸಾಮಾನ್ಯ ಎಂಬ ವಿಚಾರಣಾಧಿಕಾರಿಗಳ ವಿವರಣೆಗಳು ಅಂಗೀಕಾರ್ಹವಲ್ಲ. ತಡೆಯಾಜ್ಞೆ ನೀಡಲು ಶಿಕಾರಿಪುರದ ಸಿವಿಲ್ ಮತ್ತು ಜೆಎಂಎಫ್‌ಸಿ ನ್ಯಾಯಾಲಯಕ್ಕೆ ಕಾನೂನುಸಮ್ಮತವಾಗಿ ವ್ಯಾಪ್ತಿ ಇರಲಿಲ್ಲವೆಂಬ ಅಂಶವನ್ನು ನ್ಯಾಯಾಲಯದ ಗಮನಕ್ಕೆ ತರಲು ಕ್ರಮಗಳನ್ನು ಆರೋಪಿತರೇ ಕೈಗೊಳ್ಳಬೇಕಿತ್ತು. ಇಲಾಖಾ ಮುಖ್ಯಸ್ಥರಿಂದ ಸೂಕ್ತ ನಿರ್ದೇಶನಗಳನ್ನು ಪಡೆದು ಸಕಾರಿ ವಕೀಲರ ಮೂಲಕ ತಡೆಯಾಜ್ಞೆ ತೆರವಿಗೆ ನ್ಯಾಯಾಲಯವನ್ನು ಕೋರುವುದು ಆರೋಪಿತರ ಕರ್ತವ್ಯ ಆಗಿತ್ತು. ಹಾಗೆ ಮಾಡಿಲ್ಲ ಆರೋಪದಲ್ಲಿ ನಮೂದಿಸಿರುವ ಬಾಕಿ ಮೊತ್ತದ ಪೈಕಿ ಬಹುಪಾಲು ಮೊತ್ತ ಅಂದರೆ ರೂ.2,26,13,424–00ಗಳು ಇನ್ನೂ ವಸೂಲಾಗದೇ ಉಳಿದಿತ್ತು. ಶ್ರೀ ರೋಹಿದಾಸ್ ನಾಯಕ್ ಇವರಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಸದರಿಯವರು ದಿನಾಂಕ 30–06–2003ರಂದು ವಯೋನಿವೃತ್ತಿ ಹೊಂದಿದ್ದು, ವಸೂಲಾಗಿರುವ ಮೊತ್ತಗಳು ಅವರ ನಿವೃತ್ತಿಯ ನಂತರದಲ್ಲಿ ವಸೂಲಾಗಿರುವಂಥಹದ್ದಾಗಿದೆ. ಆದುದರಿಂದ ಸದರಿ ವಸೂಲಾಗಿರುವ ಮೊತ್ತವನ್ನೊಳಗೊಂಡ ಅವರ ರಕ್ಷಣಾ ವಾದವು ಸಮರ್ಥನೀಯವಲ್ಲ. ಹೀಗಾಗಿ ಆರೋಪಿತರೇ ಕಾರಣರಾಗಿರುತ್ತಾರೆ.

ಎರಡನೇ ಆರೋಪವು 2002–03ನೇ ಸಾಲಿನಲ್ಲಿ ಶಿವಮೊಗ್ಗ ಜಿಲ್ಲೆಯ ತಾಲ್ಲೂಕುಗಳ ಸಾರಾಯಿ ಗುತ್ತಿಗೆಗಳ ಸಂಬಂಧದಲ್ಲಿ ಗುತ್ತಿಗೆದಾರರಿಂದ ವಸೂಲು ಮಾಡಬೇಕಾಗಿದ್ದ ಗುತ್ತಿಗೆ ಹಣವನ್ನು ನಿಗದಿತ ಸಮಯದಲ್ಲಿ ವಸೂಲು ಮಾಡಲು ವಿಫಲರಾಗಿ ದಿನಾಂಕ 22–05–2003ರಂದು ಇದ್ದಂತೆ ಗುತ್ತಿಗೆ ಹಣ ಮತ್ತು ಬಡ್ಡಿ ಸೇರಿದಂತೆ ರೂ.5,50,79,482–00ಗಳನ್ನು ಬಾಕಿ ಉಳಿಸಿ ಕರ್ತವ್ಯಲೋಪವೆಸಗಿದ್ದಾರೆ ಎಂಬುದಾಗಿದೆ. ಇಲ್ಲಿಯೂ ಸಹ ಸದರಿ ದಿನಾಂಕದಂದು ಅಷ್ಟು ಮೊತ್ತದ ಗುತ್ತಿಗೆ ಹಣ ಬಾಕಿ ಉಳಿದಿತ್ತು ಎಂಬುದು ವಿಚಾರಣೆಯಲ್ಲಿ ಸಾಬೀತಾಗಿರುವ ನಿರ್ವಿವಾದಿತ ಅಂಶವಾಗಿದೆ. ಆದರೆ ತದನಂತರದಲ್ಲಿ ಈ ಮೊತ್ತವನ್ನು ವಸೂಲು ಮಾಡಲಾಗಿದೆಯೆಂಬ ಅಪಾದಿತರ ರಕ್ಷಣಾ ವಾದದ ಅಧಾರದಲ್ಲಿ ಆರೋಪ ರುಜುವಾತಾಗಿಲ್ಲವೆಂದು ವಿಚಾರಣಾಧಿಕಾರಿಯು ನಿರ್ಣಯಕ್ಕೆ ಬಂದಿದ್ದಾರೆ. ಈ ಆರೋಪದಲ್ಲಿ ಒಳಗೊಂಡಿರುವ ಮೊತ್ತವು ಸಂಪೂರ್ಣವಾಗಿ ವಸೂಲಾಗಿರುವುದು

ಕಂಡುಬಂದಿರುವುದರಿಂದ, ಇಬ್ಬರೂ ಆಪಾದಿತರ ಸಂಬಂಧದಲ್ಲಿ ಈ ಆರೋಪವು ಸಾಬೀತಾಗಿಲ್ಲವೆಂಬ ವಿಚಾರಣಾಧಿಕಾರಿಯವರ ನಿರ್ಣಯವನ್ನು ಒಪ್ಪಲಾಗಿದೆ.

ಮೂರನೇ ಆರೋಪವು, 2001-02ನೇ ಸಾಲಿನ ಶಿವಮೊಗ್ಗ ಮತ್ತು ಹೊಸನಗರ ತಾಲ್ಲೂಕುಗಳ ಗುತ್ತಿಗೆಗಳಿಗೆ ಸಂಬಂಧಿಸಿದಂತೆ ಶ್ರೀ ಆರ್.ಎಸ್. ರಮೇಶರಾವ್ ಅಬಕಾರಿ ಗುತ್ತಿಗೆದಾರರು ನೀಡಿದ್ದ ಮೂರನೇ ಬ್ಯಾಂಕ್ ಗ್ಯಾರಂಟಿಯನ್ನು ಸಕಾಲದಲ್ಲಿ ನಗದೀಕರಿಸದೇ ರಾಜ್ಯದ ರಾಜಸ್ವದ ಹಿತದೃಷ್ಟಿಯನ್ನು ನಿರ್ಲಕ್ಷಿಸಿ ಕರ್ತವ್ಯಲೋಪವೆಸಗಲಾಗಿದೆ ಎಂಬುದಾಗಿದೆ. ಬ್ಯಾಂಕ್ ಗ್ಯಾರಂಟಿಗಳನ್ನು ಪಡೆಯುವುದು ಮತ್ತು ಅವುಗಳನ್ನು ಸಕಾಲದಲ್ಲಿ ನಗದೀಕರಿಸುವುದು ಈ ಆಪಾದಿತರ ಕರ್ತವ್ಯವಾಗಿರಲಿಲ್ಲ. ಅದು ಅಬಕಾರಿ ಉಪ ಆಯುಕ್ತರಿಗೆ ಹಂಚಿಕೆಯಾದ ಕರ್ತವ್ಯವಾಗಿತ್ತು. ಆದುದರಿಂದ ಶ್ರೀ ಕೆ.ಆರ್.ಗೌಡರ್, ಅಬಕಾರಿ ಅಧೀಕ್ಷಕರು ಇವರನ್ನು ತಪ್ಪಿತಸ್ಥರೆಂದು ನಿರ್ಧರಿಸಲು ಸಾಧ್ಯವಿಲ್ಲ ಎಂಬುದಾಗಿ ವಿಚಾರಣಾಧಿಕಾರಿಯು ನಿರ್ಣಯಕ್ಕೆ ಬಂದಿದ್ದಾರೆ. ವಿಚಾರಣಾಧಿಕಾರಿಯವರ ನಿರ್ಣಯವು ಸಮಂಜಸವೆಂದು ಕಂಡುಬರುವುದರಿಂದ, ಅವರ ನಿರ್ಣಯವನ್ನು ಒಪ್ಪಲಾಗಿದೆ. ಆದರೆ ಶ್ರೀ ರೋಹಿದಾಸ್ ನಾಯಕ್, ಅಂದಿನ ಅಬಕಾರಿ ಉಪ ಆಯುಕ್ತರು ಇವರ ಮೇಲಿನ ಆರೋಪಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಗುತ್ತಿಗೆದಾರರು ಶಿವಮೊಗ್ಗ ಮತ್ತು ಹೊಸನಗರ ತಾಲ್ಲೂಕುಗಳ 2001-02ನೇ ಸಾಲಿನ ಗುತ್ತಿಗೆಗಳಿಗೆ ನೀಡಿದ್ದ ಮೂರನೇ ಬ್ಯಾಂಕ್ ಗ್ಯಾರಂಟಿಗಳನ್ನು ಜೂನ್ 2002ರೊಳಗೆ ನಗದೀಕರಿಸಿ ಗುತ್ತಿಗೆದಾರರಿಂದ ಬಾಕಿ ಇದ್ದ ಗುತ್ತಿಗೆ ಹಣಕ್ಕೆ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿತ್ತು. ಆದರೆ ಗುತ್ತಿಗೆ ಅವಧಿ ಮುಗಿದ ನಂತರವೂ, ಬ್ಯಾಂಕ್ ಗ್ಯಾರಂಟಿಗಳನ್ನು ನಗದೀಕರಿಸದೇ ಗುತ್ತಿಗೆದಾರರಿಗೆ ಅನುಕೂಲಕರವಾಗಿ ಬ್ಯಾಂಕ್ ಗ್ಯಾರಂಟಿಗಳ ಸಿಂಧುತ್ವದ ಅವಧಿಯನ್ನು ವಿಸ್ತರಿಸಲು ಬ್ಯಾಂಕ್‌ನೊಂದಿಗೆ ಪತ್ರ ವ್ಯವಹಾರ ಮಾಡಿದ್ದಾರೆ. ನಂತರ ಗುತ್ತಿಗೆ ಅವಧಿ ಮುಗಿದ ನಂತರ ನಾಲ್ಕು ತಿಂಗಳ ನಂತರ ಬ್ಯಾಂಕ್ ಗ್ಯಾರಂಟಿಗಳನ್ನು ನಗದೀಕರಿಸಿಕೊಂಡಿದ್ದಾರೆ. ಬಾಕಿ ಹಣದ ಮೇಲೆ ಬಡ್ಡಿ ಆಕರಣೆಗೆ ಅವಕಾಶವಿತ್ತೆಂಬ ಕಾರಣದಿಂದ ಗುತ್ತಿಗೆದಾರರ ಕೋರಿಕೆಯನ್ನು ಪರಿಗಣಿಸಿ ನಗದೀಕರಣವನ್ನು ಮುಂದೂಡಿರುವುದಾಗಿ ತಿಳಿಸಿರುವುದು. ಸರ್ಕಾರದ ರಾಜಸ್ವ ವಸೂಲಾತಿಯ ಬಗ್ಗೆ ಹೊಂದಿರುವ ನಿರ್ಲಕ್ಷ್ಯ ಧೋರಣೆ ಮತ್ತು ಬಾಕಿ ಉಳಿಸಿಕೊಂಡಿದ್ದರೂ ಸರ್ಕಾರದ ಹಿತಾಸಕ್ತಿಗೆ ವಿರುದ್ಧವಾಗಿ ಗುತ್ತಿಗೆದಾರರ ಬಗ್ಗೆ ಹೊಂದಿದ್ದ ಮೃದುಧೋರಣೆಯನ್ನು ಎತ್ತಿ ತೋರಿಸುತ್ತದೆ. ನಿಯಮಾನುಸಾರ ಜೂನ್ 2002ರೊಳಗೆ ಮೂರನೇ ಬ್ಯಾಂಕ್ ಗ್ಯಾರಂಟಿಗಳನ್ನು ನಗದೀಕರಿಸಲು ತಪ್ಪಿರುವುದರಿಂದ ಕರ್ನಾಟಕ ಅಬಕಾರಿ (ಸಾರಾಯಿ ಚಿಲ್ಲರೆ ಮಾರಾಟ ಹಕ್ಕಿನ ಗುತ್ತಿಗೆ) ನಿಯಮಗಳ ನಿಯಮ 17(ಬಿ)ಅನ್ನು ಉಲ್ಲಂಘಿಸಿರುವುದು ಮತ್ತು ಕರ್ತವ್ಯಲೋಪವೆಸಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ ಶ್ರೀ ರೋಹಿದಾಸ್ ಇವರ ಬಗ್ಗೆ ವಿಚಾರಣಾಧಿಕಾರಿಗಳ ನಿರ್ಣಯವನ್ನ ಒಪ್ಪದೇ 3ನೇ ಆರೋಪವು ರುಜುವಾತಾಗಿದೆಯೆಂದು ಸರ್ಕಾರ ನಿರ್ಣಯಿಸಿದೆ.

ನಾಲ್ಕನೇ ಆರೋಪವು 2002-03ನೇ ಸಾಲಿನಲ್ಲಿ ಶಿವಮೊಗ್ಗ ವಲಯ-1, ಶಿವಮೊಗ್ಗ ವಲಯ-2 ತೀರ್ಥಹಳ್ಳಿ ಮತ್ತು ಸಾಗರ ವಲಯಗಳ ಅಬಕಾರಿ ನಿರೀಕ್ಷಕರು ಸಾರಾಯಿ ಮೇಲಿನ ಅಬಕಾರಿ ಸುಂಕ ಮತ್ತು ಮದ್ಯದ ಮೇಲಿನ ಸುಂಕದ ಬಾಬ್ತು ಒಟ್ಟು 1,11,36,246-00ಗಳನ್ನು ನಗದು ರಸೀದಿಗಳನ್ನು ನೀಡುವ ಮೂಲಕ ಸಂಗ್ರಹಿಸಿದ್ದು, ಸಂಗ್ರಹಿಸಿದ ಹಣವನ್ನು ಎರಡು ದಿನಗಳ ಒಳಗಾಗಿ ಸರ್ಕಾರಿ ಖಜಾನೆಗೆ ಜಮಾ ಮಾಡದೇ ತಾತ್ಕಾಲಿಕ ದುರುಪಯೋಗ ಪಡಿಸಿಕೊಂಡಿದ್ದಾರೆ. ಅಧೀನ ಕಛೇರಿಗಳಲ್ಲಿ ಸಂಗ್ರಹಿಸಲಾದ ರಾಜಸ್ವದ ಹಣವನ್ನು ವಿಳಂಬವಾಗದಂತೆ ಸರ್ಕಾರದ ಖಜಾನೆಗೆ ಜಮಾ ಮಾಡುವಂತೆ ನಿಗಾವಹಿಸುವುದು ಆಪಾದಿತರ ಕರ್ತವ್ಯವಾಗಿದ್ದು, ಕರ್ತವ್ಯ ವಿಫಲರಾಗಿ ಬೃಹತ್ ಪ್ರಮಾಣದ ಮೊತ್ತವು ತಾತ್ಕಾಲಿಕವಾಗಿ ದುರುಪಯೋಗವಾಗಲು ಅವಕಾಶ ಮಾಡಿಕೊಟ್ಟಿದ್ದಾರೆ ಎಂಬುದಾಗಿದೆ. ಸಂಬಂಧಪಟ್ಟ ಅಬಕಾರಿ ನಿರೀಕ್ಷಕರು ಮತ್ತು ಅಬಕಾರಿ ಉಪ ನಿರೀಕ್ಷಕರು ರಾಜ್ಯದ ರಾಜಸ್ವದ ಹಿತದೃಷ್ಟಿಯಿಂದ ಹಣ ಸಂಗ್ರಹಕ್ಕೆ ಮುಂಚೆಯೇ ಮುಂಗಡ ರಸೀದಿ ನೀಡಿ ನಂತರದಲ್ಲಿ ರಸೀದಿಯಲ್ಲಿ ಒಳಗೊಂಡ ಹಣವನ್ನು ವಸೂಲು ಮಾಡುವ ಕ್ರಮ ಅನುಸರಿಸಿದ್ದಾರೆಂದೂ, ವಾಸ್ತವವಾಗಿ ಹಣ ಸಂಗ್ರಹಣೆ ಮಾಡಿಲ್ಲವಾದುದರಿಂದ ತಾತ್ಕಾಲಿಕ ದುರುಪಯೋಗವಾಗಿರುವ ಮತ್ತು ಅದರಿಂದಾಗಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ನ್ನು ಉಲ್ಲಂಘನೆಯಾಗಿರುವ ಪ್ರಶ್ನೆ ಉದ್ಭವಿಸಿರುವುದಿಲ್ಲವೆಂದೂ, ಆರೋಪಪರ ಸಾಕ್ಷಿಯು ಲೆಕ್ಕಗಳ ತಪಾಸಣೆ ನಡೆಸಿ ತಪಾಸಣೆ ವರದಿ ಸಲ್ಲಿಸಿದಾಗಲೇ ಈ ವಿಷಯವು ಅಪಾದಿತರ ಗಮನಕ್ಕೆ ಬಂದಿರುವುದಾಗಿ ವಿಚಾರಣೆಯಲ್ಲಿ ಮಾಡಲಾಗಿರುವ ರಕ್ಷಣಾ ವಾದವನ್ನು ಅರ್ಥವಾಗಿಟ್ಟುಕೊಂಡು ವಿಚಾರಣಾಧಿಕಾರಿಯು ಆರೋಪ ಸಾಬೀತಾಗಿಲ್ಲವೆಂಬ ನಿರ್ಣಯಕ್ಕೆ ಬಂದಿದ್ದಾರೆ. ಸರ್ಕಾರದ ಪರವಾಗಿ ಹಣ ಸಂಗ್ರಹಿಸುವ ಯಾರೇ ಸರ್ಕಾರಿ ನೌಕರನು ನಿಗದಿತ ನಮೂನೆಯ ರಸೀದಿಯನ್ನು ನೀಡಬೇಕು ಮತ್ತು ಹಾಗೆ ಸಂಗ್ರಹಿಸಿದ ಹಣವನ್ನು ಎರಡು ದಿನಗಳ ಒಳಗಾಗಿ ಸರ್ಕಾರದ ಖಜಾನೆಗೆ ಜಮಾ ಮಾಡಬೇಕಾದ್ದು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ರ ಮೇರೆಗೆ ಕಡ್ಡಾಯವಾಗಿದೆ. ನಗದು ಹಣ ಸಂಗ್ರಹ ಮಾಡದೇ ಮುಂಗಡ ರಸೀದಿ ನೀಡಿ ನಂತರ ತಡವಾಗಿ ಹಣವನ್ನು ಸಂಗ್ರಹಿಸಿ ಖಜಾನೆಗೆ ಪಾವತಿಸುವ ಕ್ರಮ ಅನುಸರಿಸಲು ಯಾವುದೇ ನಿಯಮಗಳಲ್ಲಿ ಅವಕಾಶವಿರುವುದಿಲ್ಲ. ಆದರೆ ಅಬಕಾರಿ ನಿರೀಕ್ಷಕರು ಅಥವಾ ಅಬಕಾರಿ ಉಪ ನಿರೀಕ್ಷಕರು ಅಂತಹ ಕ್ರಮ ಅನುಸರಿಸಿರುವುದು ಆಕ್ರಮವಾಗಿರುತ್ತದೆ. ರಸೀದಿ ನೀಡುವ ಕ್ರಮದ ಉದ್ದೇಶವೇ ತನಗೆ ಅಂತಹ ರಸೀದಿಯಲ್ಲಿ ಸಂಗ್ರಹಿಸಿರುವ ಮೊತ್ತ ಸಂದಾಯವಾಗಿದೆ ಎಂಬುದಕ್ಕೆ ನೀಡುವ ರುಜುವಾತಾಗಿರುತ್ತದೆ ಮತ್ತು ಆ ಮೂಲಕ ಸಂಗ್ರಹವಾದ ಹಣವನ್ನು ಲೆಕ್ಕಕ್ಕೆ ತರುವುದಾಗಿದೆ. ಹಾಗಿರುವಾಗ ರಾಜಸ್ವದ ಹಿತದೃಷ್ಟಿಯಿಂದ ಹಣ ಸಂಗ್ರಹಿಸದೇ ಮುಂಗಡವಾಗಿ ರಸೀದಿ ನೀಡುವ ನಿಯಮಕ್ಕೆ ವಿರುದ್ಧವಾದ ಕ್ರಮ ಅನುಸರಿಸಲು ಅನಿವಾರ್ಯವಾದ ಸಂದರ್ಭವಿತ್ತೆಂಬುದು ಕಂಡುಬರುವುದಿಲ್ಲ. ಅಲ್ಲದೇ ಹಾಗೆ ಅನಿವಾರ್ಯವಾದ ಸಂದರ್ಭವಿದ್ದಲ್ಲಿ ಅಂತಹ ಕ್ರಮಕ್ಕೆ ಸಕ್ಷಮ ಪ್ರಾಧಿಕಾರದಿಂದ ನಿಯಮ ಸಡಿಲಿಕೆಯನ್ನು ಅಥವಾ ಮಂಜೂರಾತಿಯನ್ನು ಪಡೆಯಬೇಕಾಗಿತ್ತು. ಗುತ್ತಿಗೆದಾರರು ತಾಲ್ಲೂಕುಗಳಲ್ಲಿ ಮಾರಾಟ ಮಾಡುವುದಕ್ಕೆ ಸಾರಾಯಿಯನ್ನು ಎತ್ತುವ ಪೂರ್ವದಲ್ಲಿ ಅಂತಹ ಸಾರಾಯಿಯ ಪ್ರಮಾಣಕ್ಕೆ ಅನುಗುಣವಾದ ಅಬಕಾರಿ ಸುಂಕವನ್ನು ಪಾವತಿಸಬೇಕಾಗಿರುತ್ತದೆ. ಅಂತಹ ಅಬಕಾರಿ ಸುಂಕವನ್ನು ಸಾರಾಯಿ ಎತ್ತುವಳಿ ಮಾಡುವುದಕ್ಕೆ ಮುಂಚೆ ಸಂದಾಯ ಮಾಡುವಂತೆ ಮತ್ತು ಸಂದಾಯವಾದ ಹಣವನ್ನು ಸರ್ಕಾರದ ಖಜಾನೆಗೆ ನಿಯಮಾನುಸಾರ ನಿಗದಿತ ಎರಡು ದಿನಗಳ ಒಳಗೆ ಜಮಾ ಮಾಡುವಂತೆ ನೋಡಿಕೊಳ್ಳುವುದು ಃ ನಿಗಾವಹಿಸುವುದು ಜಿಲ್ಲಾ ಮಟ್ಟದ ಅಧಿಕಾರಿಗಳಾಗಿದ್ದ ಆಪಾದಿತರ ಕರ್ತವ್ಯವಾಗಿತ್ತು. ಅಲ್ಲದೇ ರಾಜಸ್ವ ಸಂಗ್ರಹಣೆಯ ವ್ಯವಹಾರಗಳ ಬಗ್ಗೆ ದಿನಂಪ್ರತಿ ನಿಗಾವಹಿಸಿ ಕಾಲಕಾಲಕ್ಕೆ ವರದಿಗಳನ್ನು ಪಡೆಯುವುದು, ರಾಜಸ್ವ ಸಂಗ್ರಹಣೆಯ ಅಂಕಿ ಅಂಶಗಳನ್ನು ಅಬಕಾರಿ ಆಯುಕ್ತರಿಗೆ ತಿಳಿಸುವುದು ಜಿಲ್ಲಾ ಮಟ್ಟದ ಅಧಿಕಾರಿಗಳ ಮುಖ್ಯವಾದ ಕರ್ತವ್ಯವಾಗಿರುತ್ತದೆ. ಆದರೆ ಈ ಆಪಾದಿತರು ಅಧೀನ ಸಿಬ್ಬಂದಿಯವರು ರಸೀದಿ ನೀಡಿ ನಂತರ ತಡವಾಗಿ ಹಣ ಸಂಗ್ರಹಿಸಿ ತಡವಾಗಿ ಸರ್ಕಾರಕ್ಕೆ ಜಮಾ ಮಾಡುತ್ತಿದ್ದ ಆಕ್ರಮವು ತಮ್ಮ ಗಮನಕ್ಕೆ ಆಡಿಟ್ ವರದಿ ಬಂದಾಗಲೇ ತಮಗೆ ಅರಿವಾಗಿದ್ದು ಎಂದು ವಾದಿಸಿರುವುದು ಅವರ ಕರ್ತವ್ಯ ನಿರ್ಲಕ್ಷ್ಯತೆಗೆ ಸ್ಪಷ್ಟವಾದ ನಿದರ್ಶನವಾಗಿರುತ್ತದೆ. ಅಧೀನ ಕಛೇರಿಗಳ ವ್ಯವಹಾರಗಳ ಮೇಲೆ ಸೂಕ್ತವಾಗಿ ನಿಗಾವಹಿಸದೇ ಅಥವಾ

ಬುದ್ಧ್ಯಾಪೂರ್ವಕವಾಗಿ ಈ ರೀತಿಯ ಅಕ್ರಮಗಳು ನಡೆಯಲು ಅವಕಾಶ ಮಾಡಿಕೊಟ್ಟು ಆಪಾದಿತರು ಕರ್ತವ್ಯಲೋಪವೆಸಗಿದ್ದಾರೆಂಬುದು ಸಷ್ಟವಾಗಿ ಕಂಡುಬರುತ್ತಿರುವುದರಿಂದ, ಈ ಆರೋಪ ರುಜುವಾತಾಗಿಲ್ಲವೆಂಬ ವಿಚಾರಣಾಧಿಕಾರಿಯವರ ನಿರ್ಣಯವನ್ನು ಒಪ್ಪದೇ, ಈ ಆರೋಪವು ರುಜುವಾತಾಗಿದೆಯೆಂದು ನಿರ್ಣಯಿಸಿದೆ.

ಮೇಲೆ ವಿವರಿಸಿರುವಂತೆ ಶ್ರೀ ಕೆ.ಆರ್.ಗೌಡರ್, ನಿವೃತ್ತ ಅಬಕಾರಿ ಅಧೀಕ್ಷಕರ ವಿರುದ್ಧದ ಆರೋಪ–1 ಮತ್ತು ಆರೋಪ–4ಗಳು ರುಜುವಾತಾಗಿಲ್ಲವೆಂಬ ಹಾಗೂ ರೋಹಿದಾಸ್ ನಾಯಕ್, ನಿವೃತ್ತ ಅಬಕಾರಿ ಉಪ ಆಯುಕ್ತರ ವಿರುದ್ಧ 1,3,4ನೇ ಆರೋಪಗಳು ರುಜುವಾತಾಗಿಲ್ಲವೆಂಬ ವಿಚಾರಣಾಧಿಕಾರಿಯವರ ನಿರ್ಣಯಗಳನ್ನು ಒಪ್ಪದೇ ಸದರಿ ಆರೋಪಗಳು ಸಾಭೀತಾಗಿದೆ ಎಂದು ನಿರ್ಣಯಿಸಿ ಆರೋಪಿ ನಿವೃತ್ತ ಅಧಿಕಾರಿಗಳಿಗೆ ಮೇಲೆ ಓದಲಾದ ಕ್ರಮಾಂಕ (3)ರ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು. ಆಪಾಧಿತರಿಬ್ಬರೂ ಮೇಲೆ (4)ರಲ್ಲಿ ಓದಲಾದ ಉತ್ತರ ಸಲ್ಲಿಸಿದ್ದಾರೆ.

1. **ಆರೋಪ 1ಕ್ಕೆ ಸಂಬಂಧಿಸಿದಂತೆ:–** ತಾವು ಅಬಕಾರಿ ಉಪ ಆಯುಕ್ತರ ಅಧೀನದಲ್ಲಿ ಅಬಕಾರಿ ಅಧೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದುದರಿಂದ, ಸದರಿ ಕಾರ್ಯಾವಧಿಯಲ್ಲಿ 2001–02ನೇ ಸಾಲಿನ ಸಾರಾಯಿ ಗುತ್ತಿಗೆ ಹಣ ವಸೂಲಾತಿ ವಿಷಯದಲ್ಲಿ ಅಬಕಾರಿ ಉಪ ಆಯುಕ್ತರ ನಿರ್ಣಯ ಮತ್ತು ನಿರ್ದೇಶನದಂತೆ ಕಾರ್ಯನಿರ್ವಹಿಸಿರುವುದಾಗಿಯೂ, ಸ್ವತಂತ್ರ ಕಾರ್ಯಾಧಿಕಾರ ಇರಲಿಲ್ಲವೆಂದೂ ಉಪ ಆಯುಕ್ತರ ನಿರ್ದೇಶನವನ್ನು ಪಾಲಿಸುವುದು ಮಾತ್ರ ತಮ್ಮ ಕರ್ತವ್ಯವಾಗಿತ್ತೆಂದೂ ತಿಳಿಸಿದ್ದಾರೆ. ಹಣ ವಸೂಲಾಗದಿರುವುದಕ್ಕೆ ಮೂಲ ಕಾರಣ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದಿದ್ದು ಇದರ ಲಾಭವನ್ನು ಜಿಲ್ಲೆಯ ಎಲ್ಲಾ ಗುತ್ತಿಗೆದಾರರು ಪಡೆದಿರುತ್ತಾರೆ. ಅಬಕಾರಿ ಉಪ ಆಯುಕ್ತರ ನಿರ್ದೇಶನದ ಮೇರೆಗೆ ಗುತ್ತಿಗೆ ಹಣ ವಸೂಲಾತಿಗೆ ತಡೆಯಾಜ್ಞೆ ನೀಡಲು ಸಿವಿಲ್ ನ್ಯಾಯಾಲಯಕ್ಕೆ ವ್ಯಾಪ್ತಿ ಇರಲಿಲ್ಲವೆಂಬ ಅಂಶವನ್ನು ನ್ಯಾಯಾಲಯದ ಗಮನಕ್ಕೆ ತರಲು ಸರ್ಕಾರಿ ವಕೀಲರಿಗೆ ಮಾಹಿತಿ ನೀಡಲಾಗಿತ್ತು. ಈ ರೀತಿಯ ಗುತ್ತಿಗೆ ಹಣ ಬಾಕಿಯು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಇತ್ತು ಹಾಗೂ ಇದಕ್ಕೆ ಹೊಣೆಗಾರರನ್ನಾಗಿ ಶಿಸ್ತು ಕ್ರಮಕ್ಕೆ ಆದೇಶಿಸಲಾದ ಅಬಕಾರಿ ಅಧೀಕ್ಷಕರನ್ನು ಆರೋಪಮುಕ್ತಗೊಳಿಸಲಾಗಿದೆ. ಇದಕ್ಕೆ ಉದಾಹರಣೆಯಾಗಿ ಶ್ರೀ ಎನ್.ಬಿ.ಖೋಜಾ, ಅಬಕಾರಿ ಅಧೀಕ್ಷಕರು, ಅಬಕಾರಿ ಉಪ ಆಯುಕ್ತರ ಕಛೇರಿ, ಬೆಳಗಾವಿ ಜಿಲ್ಲೆ ಇವರ ಪ್ರಕರಣದಲ್ಲಿ ಆದೇಶ ಸಂ:ಎಫ್‌ಡಿ 147 ಇಪಿಎಸ್ 2002 ದಿನಾಂಕ:06–05–2005 ರಲ್ಲಿ ಕೈಗೊಂಡಿರುವ ನಿರ್ಣಯದಂತೆ, ತಾವು ಸಹ ಪ್ರಾಮಾಣಿಕ ಪ್ರಯತ್ನ ಮಾಡಿರುವುದನ್ನು ಅಂತಿಮ ಲಿಖಿತ ವಾದದಲ್ಲಿ ವಿವರಿಸಿರುವುದನ್ನು ಪರಿಗಣಿಸಿ, ಶ್ರೀ ಎನ್.ಬಿ.ಖೋಜಾ ಇವರ ಪ್ರಕರಣದಲ್ಲಿ ಕೈಗೊಂಡಿರುವ ನಿರ್ಣಯವನ್ನು ತಮಗೂ ಅನ್ವಯಿಸುವಂತೆ ಕೋರಿದ್ದಾರೆ.
2. ಆರೋಪ–4ಕ್ಕೆ ಸಂಬಂಧಿಸಿದಂತೆ:– ಈ ಆರೋಪ ಕುರಿತು ಕೆಳಕಂಡ ಅಬಕಾರಿ ನಿರೀಕ್ಷಕರುಗಳ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಲಾಗಿತ್ತೆಂದು ತಿಳಿಸಿದ್ದಾರೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಶಿಸ್ತು ಕ್ರಮದ ಮುಂದಿನ ನಡವಳಿಗಳನ್ನು ಕೈಬಿಡಲಾಗಿದೆಯೆಂದು ಅಬಕಾರಿ ಆಯುಕ್ತರು ಹೊರಡಿಸಿರುವ ಆದೇಶಗಳ ಪ್ರತಿಗಳನ್ನು ಒದಗಿಸಿದ್ದಾರೆ.
   1. ಶ್ರೀ ವಿಜಯ ರೇವಡಿ, ಅಬಕಾರಿ ನಿರೀಕ್ಷಕರು, ಶಿವಮೊಗ್ಗ ವಲಯ–1
   2. ಶ್ರೀ ಬಿ.ಆರ್.ಹಿರೇಮಠ, ಅಬಕಾರಿ ನಿರೀಕ್ಷಕರು, ಶಿವಮೊಗ್ಗ ವಲಯ–2
   3. ಶ್ರೀ ಮಹಮ್ಮದ್ ಗೌಸ್, ಅಬಕಾರಿ ನಿರೀಕ್ಷಕರು, ತೀರ್ಥಹಳ್ಳಿ ವಲಯ
   4. ಶ್ರೀ ಅನ್ವರ್ ಅಹಮದ್, ಅಬಕಾರಿ ನಿರೀಕ್ಷಕರು ತೀರ್ಥಹಳ್ಳಿ ವಲಯ
   5. ಶ್ರೀ ಪಾಂಚಾಲಪ್ಪ, ಅಬಕಾರಿ ನಿರೀಕ್ಷಕರು, ಸಾಗರ ವಲಯ

ಹಣ ಪಾವತಿ ಆಗದಿದ್ದರೂ ಸಹ ರಶೀದಿಗಳನ್ನು ಕೊಟ್ಟ ಬಗ್ಗೆ ಮತ್ತು ಅನಂತರ ಸರ್ಕಾರಕ್ಕೆ ಹಣ ಪಾವತಿ ಮಾಡಿರುವುದನ್ನು ಗಮನಿಸಿ ಮೇಲಿನ ಕ್ರ.ಸಂ.1 ಮತ್ತು 2ರಲ್ಲಿನ ನೌಕರರಿಗೆ ಎಚ್ಚರಿಕೆ ನೀಡಿ ಶಿಸ್ತು ಕ್ರಮದ ಪ್ರಕರಣ ಮುಕ್ತಾಯಗೊಳಿಸಲಾಗಿದೆ. ಮತ್ತು ಕ್ರ.ಸಂ.3 ಮತ್ತು 4 ರಲ್ಲಿನ ನೌಕರರು ನಿವೃತ್ತಿ ಹೊಂದಿರುವುದರಿಂದ ಪ್ರಕರಣ ಕೈಬಿಡಲಾಗಿದೆ. ಈ ರೀತಿಯ ಕ್ರಮವನ್ನು ಶ್ರೀಮತಿ ಡಿ.ಲೀಲಾವತಿ ಇವರ ಪ್ರಕರಣದಲ್ಲಿಯೂ ಆದೇಶ ಸಂ:ಇಸಿಇ/40/ಡಿಎಸ್‌ಸಿ(2)2003 ದಿನಾಂಕ:16–05–2005ರಲ್ಲಿ ಎಚ್ಚರಿಕೆ ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸಲಾಗಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಮತ್ತು ವಿಚಾರಣಾಧಿಕಾರಿಯು ಆರೋಪ ಸಾಬೀತಾಗಿಲ್ಲವೆಂದು ತೀರ್ಮಾನಿಸಿರುವುದನ್ನು ಪರಿಗಣಿಸಿ ಆರೋಪ–4 ಸಾಬೀತಾಗಿಲ್ಲವೆಂದು ನಿರ್ಣಯಿಸುವಂತೆ ಕೋರಿದ್ದಾರೆ. ಈ ಮೇಲಿನ ಚರ್ಚೆಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಆರೋಪ–1 ಮತ್ತು ಆರೋಪ–4ಕ್ಕೆ ಕುರಿತಂತೆ ತಳೆದಿರುವ ಭಿನ್ನವಾದ ನಿರ್ಣಯವನ್ನು ಮರುಪರಿಶೀಲಿಸಿ, ವಿಚಾರಣ ವರದಿಯನ್ನು ಪರಿಗಣಿಸಿ, ಎಲ್ಲಾ ನಾಲ್ಕು ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಶ್ರೀ ಕೆ.ಆರ್.ಗೌಡರ್, ಅಬಕಾರಿ ಅಧೀಕ್ಷಕರು ಇವರು ಸಲ್ಲಿಸಿರುವ ರಕ್ಷಣಾ ವಾದವನ್ನು ನೋಡಲಾಗಿ, ಒಂದನೇ ಆರೋಪಕ್ಕೆ ಸಂಬಂಧಿಸಿದಂತೆ ಗುತ್ತಿಗೆ ಹಣ ವಸೂಲಾಗದಿರುವುದಕ್ಕೆ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದಿದ್ದು ಇದರ ಲಾಭವನ್ನು ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರು ಪಡೆದಿದ್ದಾರೆಂದು ತಿಳಿಸಿದ್ದಾರೆ, ಅಲ್ಲದೇ ಅವರು ಉಪ ಆಯುಕ್ತರ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳುವ ಅಧಿಕಾರ ಇರಲಿಲ್ಲವೆಂದೂ, ಈ ಅಧಾರದಲ್ಲಿ ಶ್ರೀ ಎನ್.ಬಿ.ಖೋಜಾ, ಅಬಕಾರಿ ಅಧೀಕ್ಷಕರ ಪ್ರಕರಣದಲ್ಲಿ ಅವನ್ನು ಆರೋಪಮುಕ್ತಗೊಳಿಸಲಾಗಿದೆಯೆಂದು ತಿಳಿಸಿದ್ದಾರೆ. ತಾವೂ ಸಹ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿರುವುದಾಗಿ ಮಂಡಿಸಿರುವ ಲಿಖಿತ ವಾದವನ್ನು ಪರಿಗಣಿಸಿ ತಮ್ಮನ್ನು ಆರೋಪಮುಕ್ತಗೊಳಿಸುವಂತೆ ಕೋರಿದ್ದಾರೆ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಜಿಲ್ಲೆಯ ಒಂದು ತಾಲ್ಲೂಕಿನ ಗುತ್ತಿಗೆದಾರರು ವಸೂಲಾತಿಗೆ ತಡೆಯಾಜ್ಞೆ ಪಡೆದಿದ್ದನ್ನು ನೆಪವಾಗಿಟ್ಟುಕೊಂಡು ಇತರ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರ ಬಾಕಿ ಹಣವನ್ನು ಸಹ ವಸೂಲು ಮಾಡದೇ ಗುತ್ತಿಗೆದಾರರಿಗೆ ಅನಗತ್ಯವಾದ ಸಹಾಯ ಮಾಡಲಾಗಿದೆ. ಗುತ್ತಿಗೆದಾರರು ತಡೆಯಾಜ್ಞೆ ಲಾಭ ಪಡೆದರೆಂದು ತಿಳಿಸಿದ್ದಾರೆ. ಆದರೆ ಒಂದು ತಾಲ್ಲೂಕಿನ ಗುತ್ತಿಗೆದಾರರು ಪಡೆದಿದ್ದ ತಡಯಾಜ್ಞೆಯ ಲಾಭವನ್ನು ಇತರ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರಿಗೆ ನೀಡಿದವರು ಆಪಾದಿತರೇ ಎಂಬುದು ನಿರ್ವಿವಾದಿತ, ಇಲ್ಲಿ ತಡೆಯಾಜ್ಞೆ ಪಡೆದಿದ್ದ ಗುತ್ತಿಗೆದಾರರನ್ನು ಹೊರತುಪಡಿಸಿ ಇತರ ಗುತ್ತಿಗೆದಾರರಿಂದ ಬಾಕಿ ಹಣ ವಸೂಲು ಮಾಡಲು ಕ್ರಮ ಕೈಗೊಳ್ಳದೇ,

ತಡಯಾಜ್ಞೆಯ ನೆಪದಿಂದ ಗುತ್ತಿಗೆದಾರರಿಂದ ಹಣ ವಸೂಲು ಮಾಡಲು ಪರಿಣಾಮಕಾರಿಯಾದ ಕ್ರಮವನ್ನು ಕೈಗೊಳ್ಳದೇ ಇರುವುದು ಸ್ಪಷ್ಟವಾಗುತ್ತದೆ. ಅಲ್ಲದೇ ಅಬಕಾರಿ ಉಪ ಆಯುಕ್ತರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದುದಾಗಿ, ಆದುದರಿಂದ ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳುವ ಅಧಿಕಾರ ಹೊಂದಿಲ್ಲವೆಂದು ಕಾರಣ ನೀಡಿ ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳುವ ಪ್ರಯತ್ನ ಮಾಡುತ್ತಿರುವುದು ಕಂಡುಬರುತ್ತದೆ, ಶ್ರೀ ಎಸ್.ಬಿ. ಖೋಜಾ, ಅಂದಿನ ಅಬಕಾರಿ ಅಧೀಕ್ಷಕರು, ಬೆಳಗಾವಿ ಜಿಲ್ಲೆ ಇದರ ಪ್ರಕರಣದಲ್ಲಿ ಸದರಿಯವರು ಉಪ ಆಯುಕ್ತರ ನಿವೃತ್ತಿಯ ನಂತರ ತೆರವಾದ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಕಾರ್ಯನಿರ್ವಹಿಸಿರುವ ಅವಧಿಯಲ್ಲಿ ಬಾಕಿ ಉಳಿದಿದ್ದ 2001–02ನೇ ಸಾಲಿನ ಗುತ್ತಿಗೆ ಹಣವನ್ನು ವಸೂಲು ಮಾಡಲು ಪ್ರಾಮಾಣಿಕ ಯತ್ನಗಳನ್ನು ನಡೆಸಿ ಗಮನಾರ್ಹವಾದ ಬಾಕಿ ಮೊತ್ತವನ್ನು ಬಡ್ಡಿ ಸಹಿತ ವಸೂಲು ಮಾಡಿರುವುದನ್ನು ಪರಿಗಣಿಸಿ ಆರೋಪ ಮುಕ್ತಗೊಳಿಸಲಾಗಿದೆಯೇ ಹೊರತು ಅವರು ಅಬಕಾರಿ ಉಪ ಆಯುಕ್ತರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದುದರಿಂದ ಸ್ವತಂತ್ರ ನಿರ್ಧಾರ ಕೈಗೊಳ್ಳುವ ಜವಾಬ್ದಾರಿ ಇರಲಿಲ್ಲವೆಂಬ ಏಕಮಾತ್ರ ಕಾರಣದಿಂದ ಆರೋಪಮುಕ್ತಗೊಳಿಸಲಾಗಿರುವುದಿಲ್ಲ, ಆದುದರಿಂದ, ಸ್ವತಂತ್ರ ನಿರ್ಧಾರ ಕೈಗೊಳ್ಳುವ ಕಾರ್ಯವ್ಯಾಪ್ತಿ ಇಲ್ಲದಿದ್ದರೂ ಜಿಲ್ಲಾ ಮಟ್ಟದ ಜವಾಬ್ದಾರಿಯುತ ಅಧಿಕಾರಿಯಾಗಿದ್ದ ಅಪಾದಿತರು ಗುತ್ತಿಗೆ ಹಣವನ್ನು ವಸೂಲು ಮಾಡಲು ಉಪ ಆಯುಕ್ತರ ನಿರ್ದೇಶನ ಪಡೆದು ಪರಿಣಾಮಕಾರಿ ಕ್ರಮವನ್ನು ಜರುಗಿಸಲು ಯಾವುದೇ ಅಡ್ಡಿ ಇತ್ತು ಎಂದು ಹೇಳಲಾಗದು.

ಆರೋಪ ನಾಲ್ಕಕ್ಕೆ ಸಂಬಂಧಿಸಿದಂತೆ ಹಣ ಪಡೆಯದೇ ರಸೀದಿ ನೀಡಿ, ಹಣ ಸಂದಾಯವಾದ ನಂತರ ಸರ್ಕಾರದ ಖಜಾನೆಗೆ ಜಮಾ ಮಾಡಲಾಗಿದೆಯೆಂದು ತಿಳಿಸಿದ್ದಾರೆ. ಹಾಗೂ ಈ ಸಂಬಂಧದಲ್ಲಿ ಅಧೀನ ಸಿಬ್ಬಂದಿಯ ಮೇಲಿನ ಶಿಸ್ತು ಕ್ರಮದ ಪ್ರಕರಣಗಳನ್ನು ಎಚ್ಚರಿಕೆ ನೀಡಿ ಅಬಕಾರಿ ಆಯುಕ್ತರು ಮುಕ್ತಾಯಗೊಳಿಸಿದ್ದಾರೆ. ಆದುದರಿಂದ, ಅದೇ ಆಧಾರದಲ್ಲಿ ತಮ್ಮ ಮೇಲಿನ ಕರ್ತವ್ಯಲೋಪದ ಆರೋಪವನ್ನು ಕೈಬಿಡಬೇಕೆಂದು ಹೇಳುತ್ತಾರೆ, ಹಣ ಪಾವತಿಗೆ ಮುಂಚೆ ರಸೀದಿ ನೀಡುವ ಕ್ರಮವನ್ನು ಅನುಸರಿಸಲು ಯಾವುದೇ ಆದೇಶ:ನಿಯಮಗಳಲ್ಲಿ ಅವಕಾಶವಿಲ್ಲ ರಾಜಸ್ವದ ಹಿತದೃಷ್ಟಿಯಿಂದ ಗುತ್ತಿಗೆದಾರರಿಂದ ನಗದು ಸಂಗ್ರಹಿಸದೇ ಮುಂಗಡ ರಸೀದಿ ನೀಡಲಾಗಿತ್ತು ತದನಂತರ ಹಣ ಪಡೆದು ಎರಡು ದಿನಗಳ ಒಳಗಾಗಿ ಖಜಾನೆಗೆ ಹಣ ಜಮಾ ಮಾಡಲಾಗಿದೆ ಎಂಬ ಆಪಾದಿತರ ರಕ್ಷಣಾ ವಾದವು ಕಲ್ಪನೆಯಿಂದು ಕೂಡಿದ್ದು ಇದನ್ನು ಆಧರಿಸಿ ವಿಚಾರಣಾಧಿಕಾರಿಗಳು ನೀಡಿರುವ ನಿರ್ಣಯವು ಕಾನೂನುಸಮ್ಮತವಲ್ಲ, ಆರೋಪಪರ ಸಾಕ್ಷಿ–1 ಮೋಹನ್ ಕುಮಾರ ಇವರು ಹಾಜರುಪಡಿಸಿರುವ ಇಎಕ್ಸ್‌ಪಿ–1 ದಾಖಲೆ ಅಂದರೆ ಅಂತರಿಕ ಲೆಕ್ಕಪರಿಶೋಧನಾ ವರದಿಯಲ್ಲಿ "Non Remittance of Amounts collected" ಎಂಬ ಶೀರ್ಷಿಕೆಯಡಿ ಆರೋಪ 4 ರಲ್ಲಿ ಒಳಗೊಂಡಿರುವ ಆರೋಪಕ್ಕೆ ಪೂರಕವಾದ ಎಲ್ಲಾ ವಿವರಗಳು ಅಂದರೆ ರಶೀದಿ ಸಂಖ್ಯೆ ದಿನಾಂಕ, ಮೊತ್ತ ಮತ್ತು ಖಜಾನೆಗೆ ಸಂದಾಯ ಮಾಡಲು ವಿಳಂಬ ಮಾಡಿರುವ ದಿನಗಳ ಸಂಖ್ಯೆಯನ್ನು ವಲಯವಾರು ನಮೂದಿಸಲಾಗಿದೆ. ಆರೋಪಪರ ಸಾಕ್ಷಿಯು ಈ ದಾಖಲೆಯನ್ನು ವಿಚಾರಣೆಯಲ್ಲಿ ಹಾಜರುಪಡಿಸಿ ಸದರಿ ದಾಖಲೆಗಳಲ್ಲಿ ಒಳಗೊಂಡಿರುವ ಅಂಶಗಳ ಸತ್ಯವಾದವೆಂದು ಸಾಕ್ಷ್ಯ ನುಡಿದಿದ್ದಾರೆ. ಹಾಗೆ ಖಜಾನೆಗೆ ಹಣ ಜಮಾ ಮಾಡಲು ವಿಳಂಬ ಮಾಡಿರುವುದು ಆರ್ಥಿಕ ಸಂಹಿತೆಯ ಅನುಚ್ಛೇದ 4ರ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ ಹಾಗೂ ಸರ್ಕಾರಿ ಹಣದ ತಾತ್ಕಾಲಿಕ ದುರುಪಯೋಗಕ್ಕೆ ಸ್ಪಷ್ಟ ನಿದರ್ಶನವಾಗಿರುತ್ತದೆ. ಹೀಗಿರುವಾಗ ಖಜಾನೆಗೆ ತಡವಾಗಿ ಹಣ ಜಮಾ ಮಾಡಿರುವುದಕ್ಕೆ ಮುಂಗಡ ರಶೀದಿ ನೀಡಲಾಗಿದೆ ಮತ್ತು ನಂತರ ಹಣ ಸಂಗ್ರಹಿಸಿ ಖಜಾನೆಗೆ ಜಮಾ ಮಾಡಲಾಗಿದೆ ಎಂಬ ವಾದ ಅಂಗೀಕಾರ್ಹವಲ್ಲ. ರಾಜಸ್ವಕ್ಕೆ ಸಂಬಂಧಿಸಿದಂತೆ ಕಟ್ಟುನಿಟ್ಟಾದ ನಿಯಮಗಳನುಸಾರ ವಸೂಲಿ ಕ್ರಮವನ್ನು ಅನುಸರಿಸುವಂತೆ ನೋಡಿಕೊಳ್ಳುವುದು ಈ ಆಪಾದಿತರ ಜವಾಬ್ದಾರಿಯಾಗಿತ್ತು ಮತ್ತು ಇವರ ಜವಾಬ್ದಾರಿಯು ಅವರ ಅಧೀನ ಸಿಬ್ಬಂದಿಗಿಂತ ಹೆಚ್ಚಿನದಾಗಿತ್ತು. ಅಂತಹ ಜವಾಬ್ದಾರಿಯನ್ನು ಸೂಕ್ತವಾಗಿ ನಿರ್ವಹಿಸದೇ ಈ ಆಪಾದಿತರು ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿಸಿದ್ದಾರೆ. ಹಾಗೂ ಇದೇ ಆರೋಪದ ಸಂಬಂಧದಲ್ಲಿ ಅವರ ಅಧೀನ ಸಿಬ್ಬಂದಿಗೆ ಎಚ್ಚರಿಕೆ ನೀಡಿ ಅಬಕಾರಿ ಆಯುಕ್ತರು ಶಿಸ್ತು ಕ್ರಮದ ನಡವಳಿ ಮುಕ್ತಾಯಗೊಳಿಸಿದ್ದಾರೆಂಬ ಕಾರಣಕ್ಕೆ ಆರೋಪ–4ಕ್ಕೆ ಸಂಬಂಧಿಸಿದಂತೆ ಈ ಆಪಾದಿತರು ದೋಷಮುಕ್ತರೆಂದು ಪರಿಗಣಿಸುವುದು ಸೂಕ್ತವಾಗುವುದಿಲ್ಲ. ಆದುದರಿಂದ ಈ ಆಪಾದಿತರ ಅಹವಾಲನ್ನು ಒಪ್ಪಿಕೊಳ್ಳದೇ ಇವರ ವಿರುದ್ಧದ 1 ಮತ್ತು 4ನೇ ಆರೋಪಗಳು ಸಾಬೀತಾಗಿವೆಯೆಂದು ನಿರ್ಣಯಿಸಿದೆ]

ಶ್ರೀ ರೋಹಿದಾಸ್ ನಾಯಕ್, ನಿವೃತ್ತ ಅಬಕಾರಿ ಉಪ ಆಯುಕ್ತರು ಇವರು ಅವರ ವಿರುದ್ಧ ಹೊರಿಸಲಾಗಿರುವ 1,3 ಮತ್ತು 4ನೇ ಆರೋಪಗಳು ರುಜುವಾತಾಗಿವೆಯೆಂದು ಶಿಸ್ತು ಪ್ರಾಧಿಕಾರವು ತಳೆದಿರುವ ಭಿನ್ನ ನಿಲುವಿನ ಮೇರೆಗೆ ನೀಡಲಾಗಿರುವ ಎರಡನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಕೆಳಕಂಡ ಕಾರಣಗಳ ಮೇರೆಗೆ ಆರೋಪಗಳು ರುಜುವಾತಾಗಿಲ್ಲವೆಂದು ಪರಿಗಣಿಸಿ ಶಿಸ್ತು ಕ್ರಮದ ಮುಂದಿನ ನಡವಳಿಗಳನ್ನು ಕೈಬಿಡುವಂತೆ ಕೋರಿದ್ದಾರೆ.

(1) ಇಲಾಖಾ ವಿಚಾರಣೆಯಲ್ಲಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುವ ಸಂದರ್ಭವನ್ನು ಪುಷ್ಟೀಕರಿಸಲು ಹೇಳಿಕೆ ನೀಡಿ ಹಲವಾರು ದಾಖಲೆಗಳನ್ನು ನೀಡಿರುವುದಾಗಿಯೂ, ಆರೋಪಪರ ಸಾಕ್ಷಿ–1 ಎಸ್.ಮೋಹನಕುಮಾರ್ ಮತ್ತು ಆರೋಪಪರ ಸಾಕ್ಷಿ–2 ಹೆಚ್.ಡಿ.ನಾಗರಾಜ ಇವರುಗಳು ಆರೋಪ ಸಾಬೀತುಪಡಿಸುವ ಯಾವುದೇ ನಿಖರವಾದ ಹೇಳಿಕೆಯನ್ನು ಸಾಕ್ಷ್ಯದಲ್ಲಿ ನುಡಿದಿರುವುದಿಲ್ಲ. ಮೊದಲನೇ ಸಾಕ್ಷಿ ವರದಿಯ ಆಧಾರದ ಮೇಲೆ ಹೇಳಿಕೆ ನೀಡಿದ್ದು ಸರ್ಕಾರಕ್ಕೆ ಬಾಕಿ ಪೂರ್ತಿ ಜಮಾ ಆಗಿರುವ ಬಗ್ಗೆ ಮಾಹಿತಿ ಇಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರಕ್ಕೆ ಪೂರ್ತಿ ಹಣ ಬಡ್ಡಿ ಸಹಿತ ಜಮಾ ಆಗಿರುವ ಬಗ್ಗೆ ತಾವು ದಾಖಲೆಗಳನ್ನು ಹಾಜರುಪಡಿಸಿರುವುದಾಗಿ ತಿಳಿಸಿದ್ದಾರೆ. ಹೀಗಿರುವಾಗ ಸರ್ಕಾರಕ್ಕೆ ನಷ್ಟವಾಗಿದೆ ಎಂಬ ಆರೋಪದಲ್ಲಿ ಯಾವುದೇ ಬಲವಾದ ದಾಖಲೆಯನ್ನು ವಿಚಾರಣೆಯಲ್ಲಿ ಹಾಜರುಪಡಿಸಿರುವುದಿಲ್ಲ. ಸರ್ಕಾರಕ್ಕೆ ಬರಬೇಕಾದ ಪೂರ್ತಿ ಹಣ ವಸೂಲಾಗಿರುವ ಬಗ್ಗೆ ದಾಖಲೆಗಳನ್ನು ನೀಡಿರುವುದಾಗಿ ತಿಳಿಸಿದ್ದಾರೆ.

(2) ವಿಚಾರಣಾಧಿಕಾರಿಯು ಶಿವಮೊಗ್ಗದಲ್ಲಿ ಆ ಅವಧಿಯಲ್ಲಿ ಮಳೆಯ ಅಭಾವ, ಸಾರಾಯಿ ನಿಷೇಧದ ಬಗ್ಗೆ ಮುಷ್ಕರಗಳೂ, ರೈತರ ನೀರಾ ಚಳುವಳಿ ಮತ್ತು ಸಾರಾಯಿ ಗುತ್ತಿಗೆದಾರರ ಶಿವಮೊಗ್ಗದ ದಿವಾಣಿ ನ್ಯಾಯಾಲಯದಲ್ಲಿ ದಾವೆ ಸಲ್ಲಿಸಿದ್ದು, ಬಾಕಿ ವಸೂಲಾತಿಗೆ ಯಥಾಸ್ಥಿತಿ ಕಾಪಾಡುವಂತೆ ಆದೇಶ ಇದ್ದುದನ್ನು ಗಮನಕ್ಕೆ ತೆಗೆದುಕೊಂಡು ಚರ್ಚಿಸಿರುತ್ತಾರೆ. ತಡೆಯಾಜ್ಞೆ ದೀರ್ಘ ಅವಧಿವರೆಗೆ ಮುಂದುವರೆದಿರುವುದನ್ನು ಗಣನೆಗೆ ತೆಗೆದುಕೊಂಡು ಮತ್ತು ಮುಖ್ಯವಾಗಿ ನಾನು ನೀಡಿರುವ ಮೌಖಿಕ ಸಾಕ್ಷ್ಯ ಮತ್ತು ಹಾಜರುಪಡಿಸಿರುವ ದಾಖಲೆಗಳ ಕಾರಣದಿಂದ ಕರ್ತವ್ಯಗಳನ್ನು ಸೂಕ್ತವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿರುವುದಾಗಿ ಯಾವುದೇ ಕರ್ತವ್ಯ ನಿರ್ಲಕ್ಷ್ಯತೆ ಎಸಗಿಲ್ಲವೆಂದೂ, ನ್ಯಾಯಾಲಯದ ತಡೆಯಾಜ್ಞೆಯಿಂದಾಗಿ ಸಾರಾಯಿ ಗುತ್ತಿಗೆ ಹಣ ವಸೂಲಾಗದಿರುವುದನ್ನು ದುರ್ನಡತೆ ಎಂದು ಹೇಳಲು ಬರುವುದಿಲ.

(3) ವಿಚಾರಣಾಧಿಕಾರಿಯವರು ಕೂಲಂಕಷವಾಗಿ ವಿಚಾರಣೆ ನಡೆಸಿ ಸಂಪೂರ್ಣ ಬಾಕಿ ವಸೂಲಾಗಿರುವ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಆರೋಪಗಳಿಗೂ ಕಾರಣಗಳನ್ನು ನೀಡಿ ಸಾಬೀತಾಗಿಲ್ಲವೆಂದು ತಿಳಿಸಿರುವಾಗ, ನಿರ್ಣಯಂಶಗಳಲ್ಲಿ ಅಪಾದಿತರ ವಿರುದ್ಧ 1 ರಿಂದ 4ನೇ ಆರೋಪಗಳನ್ನು ಸಂಶಯಾತೀತವಾಗಿ ಸಾಬೀತು ಮಾಡಲಾಗಿಲ್ಲವೆಂದು ನಿರ್ಣಯ ಬರೆದಿದ್ದಾರೆಂಬ ಕಾರಣ ನೀಡಿ ಯಾವುದೇ ಯೋಗ್ಯ ಕರಣಗಳನ್ನು ವಿವರಿಸದೇ ಕೇವಲ ಬೇರೆ ಸಂದರ್ಭಗಳಲ್ಲಿ ನ್ಯಾಯಾಲಯಗಳು ರುಜುವಾತಿನ ಮಟ್ಟಕ್ಕೆ ಸಂಬಂಧಿಸಿದಂತೆ ಆರೋಪವು ಸಂದೇಹಕ್ಕೆ ಅವಕಾಶವಿಲ್ಲದಂತೆ ರುಜುವಾತಾಬೇಕಾದ ಅಗತ್ಯತೆ ಇಲ್ಲ ಮತ್ತು ಪೂರಕವಾದ ಸಂಭಾವ್ಯ ಸಾಕ್ಷ್ಯವಿದ್ದರೆ ಸಾಕು ಎಂದು ಘೋಷಿಸಿರುವುದನ್ನು ದುರ್ಬಳಕೆ ಮಾಡಿ, ಹಾಗೆ ರುಜುವಾತು ಮಾಡಲು ಪೂರಕವಾದ ಸಂಭಾವ್ಯ ಸಾಕ್ಷ್ಯ ಕೂಡ ಇಲ್ಲದ ಸಂದರ್ಭದಲ್ಲಿ ಆರೋಪಗಳು ಸಾಬೀತಾಗುವುದಾಗಿ ಭಿನ್ನ ನಿರ್ಣಯ ದಾಖಲಿಸಿರುವುದು ಉತ್ಪ್ರೇಕ್ಷೆಯಿಂದ ಕೂಡಿದೆ.

(4) ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಗಳ ನಿರ್ಣಯಕ್ಕೆ ವ್ಯತಿರಿಕ್ತವಾಗಿ ಅಭಿಪ್ರಾಯ ನಮೂದಿಸುವಾಗ ಯಾವ ರೀತಿ ತನ್ನ ಕಾರಣಾಂಶಗಳನ್ನು ವಿವರಿಸಲೇ ಬೇಕಾಗುತ್ತದೆಂಬುದನ್ನು ಹಲವಾರು ಸಂದರ್ಭಗಳಲ್ಲಿ ನ್ಯಾಯಾಲಯಗಳು ಆದೇಶಿಸಿವೆ. ಹೆಚ್.ಸಿ.ಗೋಯಲ್ ಎಐಆರ್ 1964 ಎಸ್‌ಸಿ 364 ಪ್ರಕರಣದಲ್ಲಿ "ಕೇವಲ ವಿಚಾರಣೆಯಲ್ಲಿ ಹಾಜರುಪಡಿಸಿರುವ ಸಾಕ್ಷ್ಯಾಧಾರಗಳನ್ನು ಅವಲಂಬಿಸಿ ಶಿಸ್ತು ಪ್ರಾಧಿಕಾರವು ವಿಚಾರಣಾದಿಕಾರಿಗಳ ನಿರ್ಣಯಕ್ಕೆ ಭಿನ್ನ ನಿಲುವು ತಳೆಯಲು ಶಕ್ತವಾಗುವುದೇ ವಿನ: ಬೇರಾವುದೇ ಹೊರಗಿನ ಅಂಶಗಳಿಂದಲ್ಲ" ಎಂಬುದಾಗಿ ಆದೇಶಿಸರುವುದನ್ನು ಪರಿಪಾಲಿಸಬೇಕಾದ ಅಗತ್ಯತೆ ಇದೆ. ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರವು ವಿಚಾರಣೆ ಪ್ರಕ್ರಿಯೆಯಲ್ಲಿ ಇರುವ ಯಾವುದೇ ನಿಖರ ಮತ್ತು ಸ್ವೀಕಾರಾರ್ಹ ಸಾಕ್ಷ್ಯಗಳ ಬಗ್ಗೆ ವಿವರಣೆ ನೀಡಿರುವುದಿಲ್ಲವಾದುದರಿಂದ ಅಂತಹ ವ್ಯತಿರಿಕ್ತ ನಿರ್ಣಯವು ನ್ಯಾಯಯುತವಲ್ಲವೆಂದೂ ಬದಲಾಗಿ ಶಿಸ್ತು ಪ್ರಾಧಿಕಾರವು ವಿಚಾರಣೆಯಲ್ಲಿ ಇಲ್ಲದಿರುವ ಹೊಸ ಅಂಶಗಳು ಮತ್ತು ಹೊರಗಿನ ಅನುಮಾನಾಸ್ಪದ ಸಂದರ್ಭಗಳನ್ನು ಅಲವಂಬಿಸಿರುವುದು ಸ್ಪಷ್ಟವಿದೆಯೆಂದು ತಿಳಿಸಿದ್ದಾರೆ. ಈ ಕಾರಣಗಳಿಂದ ಆರೋಪ 1,3 ಮತ್ತು 4ಗಳು ಸಾಬೀತಾಗಿವೆಯೆಂಬ ನಿರ್ಣಯವು ಕಪೋಲಕಲ್ಪತವಾಗಿದೆ, ಆದಾರರಹಿತವಾಗಿದೆ ಮತ್ತು ಹೇಗಾದರೂ ಮಾಡಿ ನನ್ನನ್ನು ಬಲಿಪಶು ಮಾಡುವಂತಿದೆ ಎಂಬುದಾಗಿ ತಿಳಿಸಿದ್ದಾರೆ.

(5) ಎರಡನೇ ಕಾರಣ ಕೇಳುವ ಸೂಚನಾ ಪತ್ರದ ಕಂಡಿಕೆ 2ರಲ್ಲಿ ನಿಲುವು ನಮೂದಿಸುವಾಗ ಆರೋಪದಲ್ಲಿ ಬರೆದಂತೆ ಸರ್ಕಾರಕ್ಕೆ ನಷ್ಟವಾಗಿದೆ ಎಂಬುದನ್ನು ಆಧಾರ ಸಮೇತವಾಗಿ ವಿವರಿಸಲಾಗಿಲ್ಲ, ಬದಲಾಗಿ ಊಹೆಯ ವಿಷಯ ತರ್ಕಮಾಡಿ ವಿತಂಡವಾದ ನಮೂದಿಸಲಾಗಿದೆ. ಆರೋಪ–1ಕ್ಕೆ ಸಂಬಂಧಿಸಿದಂತೆ ಶಿಸ್ತು ಪ್ರಾಧಿಕಾರದ ಸಾಕ್ಷಿಗಳು ಸರ್ಕಾರಕ್ಕೆ ನಷ್ಟವಾಗಿದೆಯೆಂದೂ ಅಥವಾ ಎಷ್ಟು ನಷ್ಟವಾಗಿದೆಯೆಂದು ಸಾಕ್ಷ್ಯ ನೀಡಿಲ್ಲ. ಶಿಸ್ತು ಪ್ರಾದಿಕಾರವು ಪುರಾವೆ ಒದಗಿಸಿ ಆರೋಪವನ್ನು ಸಾಬೀತುಪಡಿಸಬೇಕಾಗಿರುವುದು ನಿಯಮವೇ ವಿನ: ಆರೋಪಿತರು ಆರೋಪವನ್ನು ನಿರಾಕರಿಸುವ ಸಾಕ್ಷ್ಯಾಧಾರ ಒದಗಿಸುವಂತೆ ಇಲಾಖಾ ವಿಚಾರಣೆಯಲ್ಲಿ ಅಪೇಕ್ಷಿಸಲಾಗಿದ್ದು ನಿಯಮ ಹೀಗಿರುವಾಗ ಸರ್ಕಾರದ ಬಾಕಿ ಹಣ ನಂತರದಲ್ಲಿ ಜಮಾ ಆಗಿದೆಯೆಂದು ನಾನು ಸ್ವತ: ತೋರಿಸಿಕೊಟ್ಟಾಗ ವೃಥಾ ಸರ್ಕಾರಕ್ಕೆ ನಷ್ಟವಾಗಿದೆಯೆಂದು ಆರೋಪ ಮಾಡಿರುವುದು ಕಂಡುಬರುತ್ತದೆ. ಅಲ್ಲದೇ ಅದನ್ನು ಸಾಬೀತುಪಡಿಸಲಿಲ್ಲವಾಗಿ ಭಿನ್ನ ನಿಲುವಿಗೆ ಅವಕಾಶವಿಲ್ಲ. ಪ್ಯಾರಾ 3ರಲ್ಲಿ ವಸೂಲಾಗಿರುವ ಮೊತ್ತಗಳು ನನ್ನ ನಿವೃತ್ತಿಯ ನಂತರದಲ್ಲಿ ವಸೂಲಾಗಿರುವುದಾಗಿ ನಮೂದಿಸಲಾಗಿದೆ. ಅಂದರೆ ಸರ್ಕಾರಕ್ಕೆ ಹಣ ಜಮಾ ಆಗಿದ್ದರೂ ಸಹ ನನ್ನನ್ನು ಶಿಕ್ಷೆಗೆ ಈಡು ಮಾಡುವ ಹುನ್ನಾರ ಇರುವಂತಿದೆ. ಇದು ಸರಿಯಲ್ಲವೆಂದು ತಿಳಿಸಿದ್ದಾರೆ.

(6) ಎರಡನೇ ಕಾರಣ ಕೇಳುವ ಸೂಚನಾ ಪತ್ರದ 4ನೇ ಕಂಡಿಕೆಯಲ್ಲಿ ನಿಯಮಾನುಸಾರ ಜೂನ್ 2002 ರೊಳಗೆ ಮೂರನೇ ಬ್ಯಾಂಕ್ ಗ್ಯಾರಂಟಿಗಳನ್ನು ನಗದೀಕರಿಸಲು ತಪ್ಪಿರುವುದಾಗಿ ಆದುದರಿಂದ ಕರ್ನಾಟಕ ಅಬಕಾರಿ (ಸಾರಾಯಿ ಚಿಲ್ಲರೆ ಮಾರಾಟ ಹಕ್ಕಿನ ಗುತ್ತಿಗೆ) ನಿಯಮಗಳ ನಿಯಮ 17(ಬಿ) ಅನ್ನು ಉಲ್ಲಂಘಿಸಿರುವುದಾಗಿ ಆದುದರಿಂದ ಆರೋಪ ಸಾಬೀತಾಗಿದೆಯೆಂಬ ನಿರ್ಣಯ ನೀಡಲಾಗಿದೆ. ಆದರೆ ನನ್ನ ಮೇಲಿನ 1ನೇ ಆರೋಪದಲ್ಲಿ ನಿಯಮ 17(ಬಿ) ಉಲ್ಲಂಘಿಸಿರುವ ಆರೋಪವೇ ಇಲ್ಲ. ಆ ಬಗ್ಗೆ ಸಾಕ್ಷಿ ಆಧಾರ ನೀಡದೇ ಈಗ ಏಕಾ ಏಕಿ ಹೊರಗಿನ ವಿಷಯ ಉಲ್ಲೇಖಿಸಲಾಗಿರುವುದು ನಿಯಮಬಾಹಿರ ಮತ್ತು ನಿಲ್ಲತಕ್ಕದ್ದಲ್ಲ.

(7) ಕಂಡಿಕೆ 5ರಲ್ಲಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 4ರಲ್ಲಿ ಕಡ್ಡಾಯ ನಿಯಮ ವಿವರಿಸಲಾಗಿದೆಯೇ ವಿನ: ವಿಚಾರಣೆಯಲ್ಲಿ ನೀಡಿರುವ ಸಾಕ್ಷ್ಯಾಧಾರಗಳನ್ನು ಅವಲಂಬಿಸಿಲ್ಲ. ಅಬಕಾರಿ ಇಲಾಖೆಯ ಅಧಿಕೃತ ಜ್ಞಾಪನ ಸಂಇಎಕ್ಸ್‌ಇ 128 ಎಂಐಎಸ್ 87 ದಿನಾಂಕ:10–12–1987 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಅಬಕಾರಿ ಉಪ ಆಯುಕ್ತರು ಇಲಾಖೆಯ ಜಿಲ್ಲಾ ಮಟ್ಟದ ಕಾರ್ಯನಿರ್ವಾಹಕ ಇಲಾಖಾ ಮುಖ್ಯಸ್ಥರಾಗಿದ್ದು ಸರ್ಕಾರಕ್ಕೆ ಬರಬೇಕಾಗಿರುವ ಬಾಕಿಯನ್ನು ಪರಿಣಾಮಕಾರಿ ಕ್ರಮಗಳಿಂದ ವಸೂಲು ಮಾಡುವ ಅಧಿಕಾರ ಮತ್ತು ಜವಾಬ್ದಾರಿ ಹೊಂದಿರುತ್ತಾರೆ. ಈ ಪರಿಣಾಮಕಾರಿ ಕ್ರಮಗಳಲ್ಲಿ ವಸೂಲಿಗಾಗಿ ಲಿಖಿತ ಒಪ್ಪಿಗೆ ಪತ್ರ ಪಡೆಯುವುದು, ಬ್ಯಾಂಕ್ ಗ್ಯಾರಂಟಿ ಬಗ್ಗೆ ಕ್ರಮಗಳು ಸಹ ಒಳಗೊಳ್ಳುತ್ತವೆ. ಸರ್ಕಾರಕ್ಕೆ ಬರಬೇಕಾದ ಹಣದ ಬಗ್ಗೆ ಪರಿಣಾಮಕಾರಿ ಕ್ರಮ ಕೈಗೊಳ್ಳುವುದು ಮುಖ್ಯವಾಗಿದೆಯೇ ವಿನ: ಗುತ್ತಿಗೆದಾರರನ್ನು ಎದುರು ಹಾಕಿಕೊಂಡು ಶಿಕ್ಷಾರ್ಹ ಕ್ರಮ ಕೈಗೊಂಡು ಸರ್ಕಾರಕ್ಕೆ ಬರಬೇಕಾದ ಹಣ ಬರಲು ಸಾಧ್ಯವಿಲ್ಲದಂತೆ ಮುನ್ನಡೆವಲ್ಲಿ ಜವಾಬ್ದಾರಿ ಎನ್ನಿಸುವುದಿಲ್ಲವೆಂದು ತಿಳಿಸಿ, ಆದಕಾರಣ ಮುಂದಿನ ಯಾವುದೇ ಕ್ರಮವನ್ನು ಕೈಬಿಡಲು ಕೋರಿರುತ್ತಾರೆ.

(8) ಶಿವಮೊಗ್ಗ ಜಿಲ್ಲೆಯ ಬೇರೆ ಸ್ಥಳಗಳಲ್ಲಿ ಕರ್ತವ್ಯ ನಿರ್ವಹಿಸಿದ ಅಧಿಕಾರಿಗಳಾದ ಶ್ರೀ ಬಿ.ಆರ್.ಹಿರೇಮಠ ಮತ್ತು ಶ್ರೀ ಅನ್ವರ್ ಅಹಮದ್ ಇವರುಗಳ ಮೇಲೆ ಕೂಡ ಇಂತಹದೇ ಆರೋಪಗಳನ್ನು ಮಾಡಿ ಇಲಾಖಾ ವಿಚಾರಣೆ ನಡೆಸಲಾಗಿದ್ದು, ಆದೇಶ ಸಂಖ್ಯೆ:ಇಸಿಇ 32 ಡಿಎಸ್‌ಸಿ(2) 2003 ದಿನಾಂಕ:16–11–2007 ಮತ್ತು ಸಂಖ್ಯೆ:ಇಸಿಇ 34 ಡಿಎಸ್‌ಸಿ (2) 2003 ದಿನಾಂಕ:06–11–2007 ರಲ್ಲಿ ಬೇರೆ ಬೇರೆ ವಿಚಾರಣಾಧಿಕಾರಿಗಳು ಆರೋಪಗಳು ಸಾಬೀತಾಗಿಲ್ಲವೆಂದು ನೀಡಿರುವ ವರದಿಗಳನ್ನು ಆಧರಿಸಿ ಆರೋಪಿತರ ಮೇಲಿನ ಆರೋಪವನ್ನು ಕೈಬಿಡಲಾಗಿದೆ. ತಮ್ಮ ಮೇಲೆ ಸಹ ಅದೇ ಆರೋಪಗಳನ್ನು ಯಥಾವತ್ತಾಗಿ ಮಾಡಿದ್ದು ತಮ್ಮ ಪ್ರಕರಣದಲ್ಲಿ ಮಾತ್ರ ಭಿನ್ನ ನಿಲುವು ದಾಖಲಿಸಿರುವುದು ಸಮಾನರಲ್ಲಿ ಭಿನ್ನತೆ ಕಾಣುವ ವಿಪರ್ಯಾಸದ ಕ್ರಮವಾಗಿದೆ ಮತ್ತು ತಮ್ಮನ್ನು ಬಲಿಪಶು ಮಾಡ ಹೊರಟಿರುವಂತೆ ಕಂಡುಬರುತ್ತಿದ್ದು ನ್ಯಾಯಸಮ್ಮತವಲ್ಲವೆಂದು ತಿಳಿಸಿದ್ದಾರೆ. ಶ್ರೀ ಬಿ.ಆರ್.ಹಿರೇಮಠ ಮತ್ತು ಶ್ರೀ ಅನ್ವರ್ ಅಹಮದ್, ಅಬಕಾರಿ ನಿರೀಕ್ಷಕರುಗಳನ್ನು ಆರೋಪಮುಕ್ತಗೊಳಿಸಿರುವಂತೆ ಮುಂದಿನ ಕ್ರಮ ಕೈಬಿಟ್ಟು ಆದೇಶ ಹೊರಡಿಸುವಂತೆ ಕೋರಿದ್ದಾರೆ.

**ಆರೋಪಿತರ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ.**

ಶ್ರೀ ಕೆ.ಆರ್.ಗೌಡರ್, ಅಬಕಾರಿ ಅಧೀಕ್ಷಕರು ಇವರು ಸಲ್ಲಿಸಿರುವ ರಕ್ಷಣಾ ವಾದವನ್ನು ನೋಡಲಾಗಿ, ಒಂದನೇ ಆರೋಪಕ್ಕೆ ಸಂಬಂಧಿಸಿದಂತೆ ಗುತ್ತಿಗೆ ಹಣ ವಸೂಲಾಗದಿರುವುದಕ್ಕೆ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದಿದ್ದು ಇದರ ಲಾಭವನ್ನು ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರು ಪಡೆದಿದ್ದಾರೆಂದು ತಿಳಿಸಿದ್ದಾರೆ, ಅಲ್ಲದೇ ಅವರು ಉಪ ಆಯುಕ್ತರ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳುವ ಅಧಿಕಾರ ಇರಲಿಲ್ಲವೆಂದೂ, ಈ ಅಧಾರದಲ್ಲಿ ಶ್ರೀ ಎನ್.ಬಿ.ಖೋಜಾ, ಅಬಕಾರಿ ಅಧೀಕ್ಷಕರ ಪ್ರಕರಣದಲ್ಲಿ ಅವನ್ನು ಆರೋಪಮುಕ್ತಗೊಳಿಸಲಾಗಿದೆಯೆಂದು ತಿಳಿಸಿದ್ದಾರೆ. ತಾವೂ ಸಹ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿರುವುದಾಗಿ ಮಂಡಿಸಿರುವ ಲಿಖಿತ ವಾದವನ್ನು ಪರಿಗಣಿಸಿ ತಮ್ಮನ್ನು ಆರೋಪಮುಕ್ತಗೊಳಿಸುವಂತೆ ಕೋರಿದ್ದಾರೆ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಜಿಲ್ಲೆಯ ಒಂದು ತಾಲ್ಲೂಕಿನ ಗುತ್ತಿಗೆದಾರರು ವಸೂಲಾತಿಗೆ ತಡೆಯಾಜ್ಞೆ ಪಡೆದಿದ್ದನ್ನು ನೆಪವಾಗಿಟ್ಟುಕೊಂಡು ಇತರ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರ ಬಾಕಿ ಹಣವನ್ನು ಸಹ ವಸೂಲು ಮಾಡದೇ ಗುತ್ತಿಗೆದಾರರಿಗೆ ಅನಗತ್ಯವಾದ ಸಹಾಯ ಮಾಡಲಾಗಿದೆ. ಗುತ್ತಿಗೆದಾರರು ತಡೆಯಾಜ್ಞೆ ಲಾಭ ಪಡೆದರೆಂದು ತಿಳಿಸಿದ್ದಾರೆ. ಆದರೆ ಒಂದು ತಾಲ್ಲೂಕಿನ ಗುತ್ತಿಗೆದಾರರು ಪಡೆದಿದ್ದ ತಡಯಾಜ್ಞೆಯ ಲಾಭವನ್ನು ಇತರ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರಿಗೆ ನೀಡಿದವರು ಆಪಾದಿತರೇ ಎಂಬುದು ನಿರ್ವಿವಾದಿತ, ಇಲ್ಲಿ ತಡೆಯಾಜ್ಞೆ ಪಡೆದಿದ್ದ ಗುತ್ತಿಗೆದಾರರನ್ನು ಹೊರತುಪಡಿಸಿ ಇತರ ಗುತ್ತಿಗೆದಾರರಿಂದ ಬಾಕಿ ಹಣ ವಸೂಲು ಮಾಡಲು ಕ್ರಮ ಕೈಗೊಳ್ಳದೇ, ತಡಯಾಜ್ಞೆಯ ನೆಪದಿಂದ ಗುತ್ತಿಗೆದಾರರಿಂದ ಹಣ ವಸೂಲು ಮಾಡಲು ಪರಿಣಾಮಕಾರಿಯಾದ ಕ್ರಮವನ್ನು ಕೈಗೊಳ್ಳದೇ ಇರುವುದು ಸ್ಪಷ್ಟವಾಗುತ್ತದೆ. ಅಲ್ಲದೇ ಅಬಕಾರಿ ಉಪ ಆಯುಕ್ತರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದುದಾಗಿ, ಆದುದರಿಂದ ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳುವ ಅಧಿಕಾರ ಹೊಂದಿಲ್ಲವೆಂದು ಕಾರಣ ನೀಡಿ ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳುವ ಪ್ರಯತ್ನ ಮಾಡುತ್ತಿರುವುದು ಕಂಡುಬರುತ್ತದೆ, ಶ್ರೀ ಎನ್.ಬಿ. ಖೋಜಾ, ಅಂದಿನ ಅಬಕಾರಿ ಅಧೀಕ್ಷಕರು, ಬೆಳಗಾವಿ ಜಿಲ್ಲೆ ಇದರ ಪ್ರಕರಣದಲ್ಲಿ ಸದರಿಯವರು ಉಪ ಆಯುಕ್ತರ ನಿವೃತ್ತಿಯ ನಂತರ ತೆರವಾದ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಕಾರ್ಯನಿರ್ವಹಿಸಿರುವ ಅವಧಿಯಲ್ಲಿ ಬಾಕಿ ಉಳಿದಿದ್ದ 2001–02ನೇ ಸಾಲಿನ ಗುತ್ತಿಗೆ ಹಣವನ್ನು ವಸೂಲು ಮಾಡಲು ಪ್ರಾಮಾಣಿಕ ಯತ್ನಗಳನ್ನು ನಡೆಸಿ ಗಮನಾರ್ಹವಾದ ಬಾಕಿ ಮೊತ್ತವನ್ನು ಬಡ್ಡಿ ಸಹಿತ ವಸೂಲು ಮಾಡಿರುವುದನ್ನು ಪರಿಗಣಿಸಿ ಆರೋಪ ಮುಕ್ತಗೊಳಿಸಲಾಗಿದೆಯೇ ಹೊರತು ಅವರು ಅಬಕಾರಿ ಉಪ ಆಯುಕ್ತರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದುದರಿಂದ ಸ್ವತಂತ್ರ ನಿರ್ಧಾರ ಕೈಗೊಳ್ಳುವ ಜವಾಬ್ದಾರಿ ಇರಲಿಲ್ಲವೆಂಬ ಏಕಮಾತ್ರ ಕಾರಣದಿಂದ ಆರೋಪಮುಕ್ತಗೊಳಿಸಲಾಗಿರುವುದಿಲ್ಲ, ಆದುದರಿಂದ, ಸ್ವತಂತ್ರ ನಿರ್ಧಾರ ಕೈಗೊಳ್ಳುವ ಕಾರ್ಯವ್ಯಾಪ್ತಿ ಇಲ್ಲದಿದ್ದರೂ ಜಿಲ್ಲಾ ಮಟ್ಟದ ಜವಾಬ್ದಾರಿಯುತ ಅಧಿಕಾರಿಯಾಗಿದ್ದ ಆಪಾದಿತರು ಗುತ್ತಿಗೆ ಹಣವನ್ನು ವಸೂಲು ಮಾಡಲು ಉಪ ಆಯುಕ್ತರ ನಿರ್ದೇಶನ ಪಡೆದು ಪರಿಣಾಮಕಾರಿ ಕ್ರಮವನ್ನು ಜರುಗಿಸಲು ಯಾವುದೇ ಅಡ್ಡಿ ಇತ್ತು ಎಂದು ಹೇಳಲಾಗದು.

ಆರೋಪ ನಾಲ್ಕಕ್ಕೆ ಸಂಬಂಧಿಸಿದಂತೆ ಹಣ ಪಡೆಯದೇ ರಸೀದಿ ನೀಡಿ, ಹಣ ಸಂದಾಯವಾದ ನಂತರ ಸರ್ಕಾರದ ಖಜಾನೆಗೆ ಜಮಾ ಮಾಡಲಾಗಿದೆಯೆಂದು ತಿಳಿಸಿದ್ದಾರೆ. ಹಾಗೂ ಈ ಸಂಬಂಧದಲ್ಲಿ ಅಧೀನ ಸಿಬ್ಬಂದಿಯ ಮೇಲಿನ ಶಿಸ್ತು ಕ್ರಮದ ಪ್ರಕರಣಗಳನ್ನು ಎಚ್ಚರಿಕೆ ನೀಡಿ ಅಬಕಾರಿ ಆಯುಕ್ತರು ಮುಕ್ತಾಯಗೊಳಿಸಿದ್ದಾರೆ. ಆದುದರಿಂದ, ಅದೇ ಆಧಾರದಲ್ಲಿ ತಮ್ಮ ಮೇಲಿನ ಕರ್ತವ್ಯಲೋಪದ ಆರೋಪವನ್ನು ಕೈಬಿಡಬೇಕೆಂದು ಹೇಳುತ್ತಾರೆ, ಹಣ ಪಾವತಿಗೆ ಮುಂಚೆ ರಸೀದಿ ನೀಡುವ ಕ್ರಮವನ್ನು ಅನುಸರಿಸಲು ಯಾವುದೇ ಆದೇಶ / ನಿಯಮಗಳಲ್ಲಿ ಅವಕಾಶವಿಲ್ಲ ರಾಜಸ್ವದ ಹಿತದೃಷ್ಟಿಯಿಂದ ಗುತ್ತಿಗೆದಾರರಿಂದ ನಗದು ಸಂಗ್ರಹಿಸದೇ ಮುಂಗಡ ರಸೀದಿ ನೀಡಲಾಗಿತ್ತು ತದನಂತರ ಹಣ ಪಡೆದು ಎರಡು ದಿನಗಳ ಒಳಗಾಗಿ ಖಜಾನೆಗೆ ಹಣ ಜಮಾ ಮಾಡಲಾಗಿದೆ ಎಂಬ ಅಪಾದಿತರ ರಕ್ಷಣಾ ವಾದವು ಕಲ್ಪನೆಯಿಂದು ಕೂಡಿದ್ದು ಇದನ್ನು ಆಧರಿಸಿ ವಿಚಾರಣಾಧಿಕಾರಿಗಳು ನೀಡಿರುವ ನಿರ್ಣಯವು ಕಾನೂನುಸಮ್ಮತವಲ್ಲ, ಆರೋಪಪರ ಸಾಕ್ಷಿ–1 ಮೋಹನ್‌ಕುಮಾರ್ ಇವರು ಹಾಜರುಪಡಿಸಿರುವ ಇಎಕ್ಸ್‌ಪಿ–1 ದಾಖಲೆ ಅಂದರೆ ಅಂತರಿಕ ಲೆಕ್ಕಪರಿಶೋಧನಾ ವರದಿಯಲ್ಲಿ "Non Remittance of Amounts collected" ಎಂಬ ಶೀರ್ಷಿಕೆಯಡಿ ಆರೋಪ 4 ರಲ್ಲಿ ಒಳಗೊಂಡಿರುವ ಆರೋಪಕ್ಕೆ ಪೂರಕವಾದ ಎಲ್ಲಾ ವಿವರಗಳು ಅಂದರೆ ರಶೀದಿ ಸಂಖ್ಯೆ ದಿನಾಂಕ, ಮೊತ್ತ ಮತ್ತು ಖಜಾನೆಗೆ ಸಂದಾಯ ಮಾಡಲು ವಿಳಂಬ ಮಾಡಿರುವ ದಿನಗಳ ಸಂಖ್ಯೆಯನ್ನು ವಲಯವಾರು ನಮೂದಿಸಲಾಗಿದೆ. ಆರೋಪಪರ ಸಾಕ್ಷಿಯು ಈ ದಾಖಲೆಯನ್ನು ವಿಚಾರಣೆಯಲ್ಲಿ ಹಾಜರುಪಡಿಸಿ ಸದರಿ ದಾಖಲೆಗಳಲ್ಲಿ ಒಳಗೊಂಡಿರುವ ಅಂಶಗಳ ಸತ್ಯವಾದವೆಂದು ಸಾಕ್ಷ್ಯ ನುಡಿದಿದ್ದಾರೆ. ಹಾಗೆ ಖಜಾನೆಗೆ ಹಣ ಜಮಾ ಮಾಡಲು ವಿಳಂಬ ಮಾಡಿರುವುದು ಆರ್ಥಿಕ ಸಂಹಿತೆಯ ಅನುಚ್ಛೇದ 4ರ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ ಹಾಗೂ ಸರ್ಕಾರಿ ಹಣದ ತಾತ್ಕಾಲಿಕ ದುರುಪಯೋಗಕ್ಕೆ ಸ್ಪಷ್ಟ ನಿದರ್ಶನವಾಗಿರುತ್ತದೆ. ಹೀಗಿರುವಾಗ ಖಜಾನೆಗೆ ತಡವಾಗಿ ಹಣ ಜಮಾ ಮಾಡಿರುವುದಕ್ಕೆ ಮುಂಗಡ ರಶೀದಿ ನೀಡಲಾಗಿದೆ ಮತ್ತು ನಂತರ ಹಣ ಸಂಗ್ರಹಿಸಿ ಖಜಾನೆಗೆ ಜಮಾ ರಾಜಸ್ವಕ್ಕೆ ಸಂಬಂಧಿಸಿದಂತೆ ಕಟ್ಟುನಿಟ್ಟಾದ ನಿಯಮಗಳನುಸಾರ ವಸೂಲಿ ಕ್ರಮವನ್ನು ಅನುಸರಿಸುವಂತೆ ನೋಡಿಕೊಳ್ಳುವುದು ಈ ಅಪಾದಿತರ ಜವಾಬ್ದಾರಿಯಾಗಿತ್ತು ಮತ್ತು ಇವರ ಜವಾಬ್ದಾರಿಯು ಅವರ ಅಧೀನ ಸಿಬ್ಬಂದಿಗಿಂತ ಹೆಚ್ಚಿನದಾಗಿತ್ತು. ಅಂತಹ ಜವಾಬ್ದಾರಿಯನ್ನು ಸೂಕ್ತವಾಗಿ ನಿರ್ವಹಿಸದೇ ಈ ಅಪಾದಿತರು ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿಸಿದ್ದಾರೆ. ಹಾಗೂ ಇದೇ ಆರೋಪದ ಸಂಬಂಧದಲ್ಲಿ ಅವರ ಅಧೀನ ಸಿಬ್ಬಂದಿಗೆ ಎಚ್ಚರಿಕೆ ನೀಡಿ ಅಬಕಾರಿ ಆಯುಕ್ತರು ಶಿಸ್ತು ಕ್ರಮದ ನಡವಳಿ ಮುಕ್ತಾಯಗೊಳಿಸಿದ್ದಾರೆಂಬ ಕಾರಣಕ್ಕೆ ಆರೋಪ–4ಕ್ಕೆ ಸಂಬಂಧಿಸಿದಂತೆ ಈ ಅಪಾದಿತರು ದೋಷಮುಕ್ತರೆಂದು ಪರಿಗಣಿಸುವುದು ಸೂಕ್ತವಾಗುವುದಿಲ್ಲ. ಆದುದರಿಂದ ಈ ಆಪಾದಿತರ ವಿರುದ್ಧದ 1 ಮತ್ತು 4ನೇ ಆರೋಪಗಳು ಸಾಬೀತಾಗಿವೆಯೆಂದು ನಿರ್ಧರಿಸಿದೆ]

ಶ್ರೀ ರೋಹಿದಾಸ್ ನಾಯಕ್, ಅಂದಿನ ಅಬಕಾರಿ ಉಪ ಆಯುಕ್ತರು ಇವರರು ಅವರ ವಿರುದ್ಧದ 1, 3 ಮತ್ತು 4ನೇ ಆರೋಪಗಳು ಸಾಬೀತಾಗಿವೆಯೆಂದು ನಿರ್ಣಯಿಸಿ ನೀಡಲಾದ ಎರಡನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಸಲ್ಲಿಸಿರುವ ರಕ್ಷಣಾ ಹೇಳಿಕೆಯನ್ನು ನೋಡಲಾಗಿ

(1) ಆರೋಪಪರ ಸಾಕ್ಷಿ ಶ್ರೀ ಎಸ್, ಮೋಹನಕುಮಾರ್ ಇವರ ಸಾಕ್ಷ್ಯ ಮತ್ತು ಅವರು ಹಾಜರು ಪಡಿಸಿರುವ ಇಎಕ್ಸ್‌ಪಿ–1 ದಾಖಲೆಯು ಒಂದನೇ ಆರೋಪದಲ್ಲಿ ತಿಳಿಸಿದಂತೆ 22–05–2003ರಂದು ಇದ್ದಂತೆ 2001–02ನೇ ಸಾಲಿನ ಸಾರಾಯಿ ಗುತ್ತಿಗೆ ಹಣ ಮತ್ತು ಬಡ್ಡಿ ಸೇರಿದಂತೆ ರೂ.2,61,34,293–00ಗಳನ್ನು ಬಾಕಿ ಉಳಿಸಿ ಕರ್ತವ್ಯ ಲೋಪವೆಸಗಿದ್ದಾರೆ ಎಂಬುದನ್ನು ಸಾಬೀತುಪಡಿಸುತ್ತದೆ. ಈ ಅಪಾದಿತರು ದಿನಾಂಕ: 30–06–2003ರಂದು ವಯೋನಿವೃತ್ತಿ ಹೊಂದಿದ ತದನಂತರದಲ್ಲಿ ಅಂದರೆ ದಿನಾಂಕ 16–07–2003 ರಂದು ರೂ.8,20,869–00ಗಳು ಮತ್ತು 21–10–2013ರಂದು ರೂ.27.00ಲಕ್ಷಗಳನ್ನು ವಸೂಲು ಮಾಡಿರುವುದಾಗಿ ವಿಚಾರಣೆಯಲ್ಲಿ

ತತ್ತೋರಿಸಿದ್ದಾರೆ, ಇವರ ನಿವೃತ್ತಿಯ ನಂತರ ಮಾಡಲಾದ ವಸೂಲಾತಿಗಳಿಗೆ ಇವರನ್ನು ಕಾರಣಕರ್ತರೆಂದು ಪರಿಗಣಿಸಲಾಗದು. ಈ ವಸೂಲಾತಿಗಳು ತದನಂತರದಲ್ಲಿ ಇಲಾಖೆಯು ಮಾಡಿರುವ ವಸೂಲಾತಿಗಳಾಗಿವೆ. ಈ ಮೊತ್ತಗಳನ್ನು ಗಣನೆಗೆ ತೆಗೆದುಕೊಂಡಾಗ್ಯೂ ಬಹುಪಾಲು ಮೊತ್ತ ರೂ.2,26,13,424–00ಗಳು ವಸೂಲಾಗದೇ ಉಳಿದಿರುವುದರಿಂದ, ಬಾಕಿ ಇದ್ದ ಹಣ ಸಂಪೂರ್ಣವಾಗಿ ವಸೂಲಾಗಿದೆ ಎಂದು ಹೇಳಿರುವ ಇವರ ಹೇಳಿಕೆಯು ಒಪ್ಪಲರ್ಹವಲ್ಲ. ಆದರೆ 2002–03ನೇ ಸಾಲಿಗೆ ಬಾಕಿ ಇದ್ದ ಗುತ್ತಿಗೆ ಹಣವು ಬ್ಯಾಂಕ್ ಗ್ಯಾರಂಟಿಯನ್ನನು ನಗದೀಕರಿಸಿದ್ದರಿಂದ ಸಂಪೂರ್ಣ ವಸೂಲಾಗಿದೆ ಎಂಬ ಅಪಾದಿತರ ವಾದವನ್ನು ಆಧರಿಸಿ ಎರಡನೇ ಆರೋಪ ರುಜುವಾತಾಗಿಲ್ಲ ಎಂಬ ವಿಚಾರಣಾಧಿಕಾರಿಯವರ ನಿರ್ಣಯನ್ನು ಶಿಸ್ತು ಪ್ರಾಧಿಕಾರವು ಒಪ್ಪಿರುತ್ತದೆಂಬುದನ್ನು ಗಮನಿಸಬಹುದಾಗಿದೆ. ಆದರೆ ಅಪಾದಿತರು ಬಾಕಿ ಇರುವ 2001–02ನೇ ಸಾಲಿನ ಗುತ್ತಿಗೆ ಹಣವನ್ನು ವಸೂಲು ಮಾಡಲು ವಿಫಲರಾಗಿ ಕರ್ತವ್ಯಲೋಪವಸಗಿರುವುದು ಆ ಮೂಲಕ ಸರ್ಕಾರಕ್ಕೆ ರಾಜಸ್ವ ನಷ್ಟವಾಗುವುದಕ್ಕೆ ಕಾರಣರಾಗಿರುವುದು ನಿರ್ವಿವಾದಿತವಾಗಿ ಸಾಬೀತಾಗುತ್ತದೆ.

(2) ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಗುತ್ತಿಗೆದಾರರು ಬಾಕಿ ವಸೂಲಾತಿಗೆ ತಡೆಯಾಜ್ಞೆ ಪಡೆದಿದ್ದನ್ನು ನೆಪವಾಗಿಟ್ಟುಕೊಂಡು ಇತರ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರರ ಬಾಕಿ ಹಣವನ್ನು ಸಹ ವಸೂಲು ಮಾಡದೇ ಗುತ್ತಿಗೆದಾರರಿಗೆ ಅನಗತ್ಯವಾಗಿ ವೃದುಧೋರಣೆ ತೋರಿಸಿ ಸಹಾಯ ಮಾಡಲಾಗಿದೆ. ಈ ಎಲ್ಲಾ ಗುತ್ತಿಗೆದಾರರು ತಡೆಯಾಜ್ಞೆಯ ಲಾಭ ಪಡೆದರೆಂದು ತಿಳಿಸಿದ್ದಾರೆ. ಆದರೆ ಒಂದು ತಾಲ್ಲೂಕಿನ ಗುತ್ತಿಗೆದಾರರು ಪಡೆದಿದ್ದ ತಡೆಯಾಜ್ಞೆಯ ಲಾಭವನ್ನು ಇತರ ಎಲ್ಲಾ ತಾಲ್ಲೂಕುಗಳ ಗುತ್ತಿಗೆದಾರರಿಗೆ ನೀಡಿದವರು ಯಾರು? ಅಂದರೆ ಅಪಾದಿತರೇ ಎಂಬುದು ನಿರ್ವಿವಾದಿತ. ಇಲ್ಲೆ ತಡೆಯಾಜ್ಞೆ ಪಡೆದಿದ್ದ ಗುತ್ತಿಗೆದಾರರನ್ನು ಹೊರತುಪಡಿಸಿ ಇತರ ತಾಲ್ಲೂಕುಗಳು ಗುತ್ತಿಗೆದಾರರಿಂದ ಬಾಕಿ ಹಣ ವಸೂಲು ಮಾಡಲು ಕ್ರಮ ಕೈಗೊಳ್ಳದೇ, ತಡೆಯಾಜ್ಞೆಯ ನೆಪದಿಂದ ಗುತ್ತಿಗೆದಾರರಿಂದ ಹಣ ವಸೂಲು ಮಾಡಲು ಪರಣಾಮಕಾರಿಯಾದ ಕ್ರಮವನ್ನು ಕೈಗೊಳ್ಳದೇ ಇರುವುದು ಸ್ಪಷ್ಟವಾಗುತ್ತದೆ.

(3) ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಯವರ ನಿರ್ಣಯಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ ಇಲಾಖಾ ವಿಚಾರಣೆಗಳಲ್ಲಿ ರುಜುವಾತಿನ ಮಟ್ಟದ ಬಗ್ಗೆ. ವಿಚಾರಣಾಧಿಕಾರಿಯು ಸರಿಯಾದ ನಿಲುವನ್ನು ತಾಳಿಲ್ಲವೆಂಬುದನ್ನು ಮಾತ್ರ ಶಿಸ್ತು ಪ್ರಾಧಿಕಾರವು ವ್ಯಕ್ತಪಡಿಸಿದೆಯೇ ಹೊರತು ಕೇವಲ ವಿಚಾರಣಾಧಿಕಾರಿಯು ಆರೋಪಗಳು ನಿಸ್ಸಂಶಯವಾಗಿ ಸಾಭಿತಾಗಿಲ್ಲವೆಂದು ಹೇಳಿರುವುದರ ಆಧಾರದ ಮೇಲೆಯೇ ವಿಚಾರಣಾಧಿಕಾರಿಗಳ ನಿರ್ಣಯಗಳನ್ನು ತಳ್ಳಿಹಾಕಲಾಗಿಲ್ಲ. ಆರೋಪ–2 ಸಾಬೀತಾಗಿಲ್ಲವೆಂಬ ವಿಚಾರಣಾಧಿಕಾರಿಯವರ ನಿರ್ಣಯವನ್ನು ಒಪ್ಪಲಾಗಿರುವುದು ಇದಕ್ಕೆ ನಿದರ್ಶನವಾಗಿದೆ.

(4) ಈ ಅಪಾದಿತರ ವಿರುದ್ಧ 1,3 ಮತ್ತು 4ನೇ ಆರೋಪಗಳು ಸಾಬೀತಾಗಿವೆಯೆಂದು ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಯವರ ನಿರ್ಣಯಕ್ಕೆ ಭಿನ್ನ ನಿಲುವು ತಳೆದಿರುವುದಕ್ಕೆ ವಿಚಾರಣೆಯಲ್ಲಿನ ಸಾಕ್ಷ್ಯ ಮತ್ತು ಆಧಾರಗಳನ್ನು ಮಾತ್ರ ಆಧರಿಸಲಾಗಿದೆಯೇ ಹೊರತು ಯಾವುದೇ ಹೊಸದಾದ ಮತ್ತು ಬಾಹ್ಯ ಅಂಶಗಳನ್ನು ಅಥವಾ ಅನುಮಾನಾಸ್ಪದವಾದ ಅಂಶಗಳನ್ನು ಆಧರಿಸಿರುವುದಿಲ್ಲ ಆರೋಪಗಳು ಸಾಭೀತಾಗಿವೆಯೆಂದು ನಿರ್ಣಯಿಸಿರುವುದನ್ನು ಎರಡನೇ ಕಾರಣ ಕೇಳುವ ಸೂಚನಾ ಪತ್ರದಲ್ಲಿ ಸೂಕ್ತವಾದ ಅಂಶಗಳನ್ನು ನಮೂದಿಸಲಾಗಿದೆ. ಇವುಗಳನ್ನು ಕಪೋಲ ಹೇಳಿಕೆಯಲ್ಲಿ ಯಾವುದೇ ಸತ್ಯಾಂಸ ಇರುವುದಿಲ್ಲ.

(5) ವಿಚಾರಣಾಧಿಕಾರಿಯು ಆರೋಪ ಪರ ಸಾಕ್ಷಿ ಶ್ರೀ.ಮೋಹನಕುಮಾರ್ ಇವರ ಹೇಳಿಕೆಯ ಬಗ್ಗೆ ವಿಚಾರಣಾ ವರದಿಯ ಪುಟ 5–6ರ ಕಂಡಿಕೆ 7 ರಲ್ಲಿ ದಾಖಲಿಸಿರುವುದು ಮತ್ತು ವಿಚಾರಣಾ ವರದಿಯ ಪುಟ 7–8 ರಲ್ಲಿ ಕಂಡಿಕೆ 8ರಡಿ " Rs.2,61,34,293/- was the Total arrears of arrack rental with interest as on 22/05/2003 for the year 2001-02. This fact is admitted by AGO. The recovery of Rs 8,20,869/- and Rs.27,00,000/- and also getting an undertaking for Rs.8011000/-for Excise Contractor-Torgal, was borne out from the evidence of AGO and and documents produced by him are not disputed by PO" ಎಂದು ಹೇಳಿರುವುದನ್ನು ಪರಿಗಣಿಸಲಾಗಿ ಅಪಾದಿತರ ಮೇಲಿನ ಆರೋಪ–1ನೇ ಸಾಬೀತಾಗಿರುವುದೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಸದರಿ ಬಾಕಿ ಮೊತ್ತ ಅಪಾದಿತರ ನಿವೃತ್ತಿಯ ನಂತರ ವಸೂಲಾಗಿರುವುದನ್ನು ಅಪಾದಿತರು ತೋರಿಸಿಕೊಟ್ಟಿದ್ದಾರೆಂಬ ಕಾರಣಕ್ಕೆ ಅವರ ಮೇಲಿನ ಆರೋಪ ರುಜುವಾತಾಗಿಲ್ಲವೆಂದು ಪರಿಗಣಿಸಲು ಸಾಧ್ಯವಿಲ್ಲ ಅಪಾದಿತರ ಕರ್ತವ್ಯದ ಅವಧಿಯಲ್ಲಿ ಮೇಲಿನಂತೆ ಬಾಕಿ ಉಳಿಸಿ ಕರ್ತವ್ಯಲೋಪವೆಸಗಿರುವುದು ಮತ್ತು ಆ ಮೂಲಕ ಸರ್ಕಾರಕ್ಕೆ ರಾಜಸ್ವ ನಷ್ಟವಾಗಲು ಕಾರಣರಾಗಿರುವುದು ಸಾಬೀತಾಗಿರುತ್ತದೆ.

(6) ಎರಡನೇ ಕಾರಣ ಕೇಳುವ ಸೂಚನಾ ಪತ್ರದಲ್ಲಿ ಶಿಸ್ತು ಪ್ರಾಧಿಕಾರವು ಭಿನ್ನ ನಿಲುವು ತಳಿದಿರುವ ಬಗ್ಗೆ ನೀಡಲಾಗಿರುವ ಕಾರಣಗಳ ಕಂಡಿಕೆ 4ರಲ್ಲಿ ಮೂರನೆಯ ಆರೋಪವು ಸಾಬೀತಾಗಿರುವುದೆಂಬ ಬಗ್ಗೆ ಕಾರಣಗಳನ್ನು ನಮೂದಿಸಲಾಗಿದ್ದು, ಆರೋಪ 3ರಲ್ಲಿ ಅಪಾದಿತರು ಕರ್ನಾಟಕ ಅಬಕಾರಿ (ಸಾರಾಯಿಯನ್ನು ಚಿಲ್ಲರೆಯಾಗಿ ಮಾರಾಟ ಮಾಡುವ ಹಕ್ಕಿನ ಗುತ್ತಿಗೆ) ನಿಯಮಗಳು, 1969ರ ನಿಯಮ 17(ಬಿ) ಅನ್ನು ಅಪಾದಿತರು ಉಲ್ಲಂಘಿಸಿರುವುದಾಗಿ ಆರೋಪ ಹೊರಿಸಲಾಗಿದೆ. ಆರೋಪ–1ರಲ್ಲಿ ನಿಯಮ 17(ಬಿ) ಬಗ್ಗೆ ಉಲ್ಲೇಖಿಸಿಲ್ಲದಿರುವುದಕ್ಕೂ ಮತ್ತು ಈ ಆರೋಪ ಸಾಭಿತಾಗಿರುವುದೆಂದು ದಾಖಲಿಸಿರುವುದಕ್ಕೂ ಸಂಬಂಧಪಡುವುದಿಲ್ಲ ಆದುದರಿಂದ ಏಕಾಏಕಿಯಾಗಿ ಹೊರಗಿನ ವಿಷಯ ಉಲ್ಲೇಖಿಸಲಾಗಿದೆ ಆದುದರಿಂದ ನಿಲ್ಲತಕ್ಕದ್ದಲ್ಲವೆಂದು ಅಪಾದಿತರು ತಿಳಿಸಿರುವುದರಲ್ಲಿ ಯಾವುದೇ ಹುರುಳಿಲ್ಲ ಮೂರನೇ ಆರೋಪವು ಸಾಬೀತಾಗಿದೆಯೆಂದು ನಿರ್ಣಯಿಸಿರುವುದಕ್ಕೆ ಶಿಸ್ತು ಪ್ರಾಧಿಕಾರವು ನೀಡಿರುವ ಕಾರಣಗಳು ಸತ್ವಯುತವಾಗಿವೆ. ಆದುದರಿಂದ ಮೂರನೇ ಆರೋಪ ಸಾಭೀತಾಗಿದೆಯೆಂದು ನಿರ್ಣಯಿಸಿರುವುದು ಕಾನೂನು ಸಮ್ಮತವಾಗಿದೆ.

(7) ರಾಜಸ್ವದ ಹಿತದೃಷ್ಟಿಯಿಂದು ಗುತ್ತಿಗೆದಾರರಿಂದ ನಗದು ಸಂಗ್ರಹಿಸದೇ ಮುಂಗಡ ರಸೀದಿ ನೀಡಲಾಗಿತ್ತು ತದನಂತರ ಹಣ ಪಡೆದು ಎರಡು ದಿನಗಳ ಒಳಗಾಗಿ ಖಜಾನೆಗೆ ಹಣ ಜಮಾ ಮಾಡಲಾಗಿದೆ ಎಂಬ ಅಪಾದಿತರ ರಕ್ಷಣಾ ವಾದವು ಕಲ್ಪನೆಯಿಂದ ಕೂಡಿದ್ದು, ಇದನ್ನು ಆಧರಿಸಿ ವಿಚಾರಣಾಧಿಕಾರಿಗಳು ನೀಡಿರುವ ನಿರ್ಣಯವು ಕಾನೂನು ಸಮ್ಮತವಲ್ಲ ಆರೋಪಪರ ಸಾಕ್ಷಿ–1 ಮೋಹನ್‌ಕುಮಾರ್ ಇವರು ಹಾಜರುಪಡಿಸಿರುವ ಇಎಕ್ಸ್‌ಪಿ–1 ದಾಖಲೆ ಅಂದರೆ ಆಂತರಿಕ ಲೆಕ್ಕಪರಿಶೋಧನಾ ವರದಿಯಲ್ಲಿ " Non Remittence of Amounts

collected" ಎಂಬ ಶೀರ್ಷಿಕೆಯಡಿ ಆರೋಪ– 4 ರಲ್ಲಿ ಒಳಗೊಂಡಿರುವ ಆರೋಪಕ್ಕೆ ಪೂರಕವಾದ ಎಲ್ಲಾ ವಿವರಗಳು ಅಂದರೆ ರಶೀದಿ ಸಂಖ್ಯೆ ರಶೀದಿ ದಿನಾಂಕ ಮೊತ್ತ ಮತ್ತು ಖಜಾನೆಗೆ ಸಂದಾಯ ಮಾಡಲು ವಿಳಂಬ ಮಾಡಿರುವ ದಿನಗಳ ಸಂಖ್ಯೆಯನ್ನು ವಲಯವಾರು ನಮೂದಿಸಲಾಗಿದೆ. ಆರೋಪಪರ ಸಾಕ್ಷಿಯು ಈ ದಾಖಲೆಯನ್ನು ವಿಚಾರಣೆಯಲ್ಲಿ ಹಾಜರುಪಡಿಸಿ ಸದರಿ ದಾಖಲೇಗಳಲ್ಲಿ ಒಳಗೊಂಡಿರುವ ಅಂಶಗಳು ಸತ್ಯವಾದವೆಂದು ಸಾಕ್ಷ್ಯ ನುಡಿದಿದ್ದಾರೆ. ಹಾಗೆ ಖಜಾನೆಗೆ ಹಣ ಜಮಾ ಮಾಡಲು ವಿಳಂಬ ಮಾಡಿರುವುದು ಆರ್ಥಿಕ ಸಂಹಿತೆಯ ಅನುಚ್ಛೇದ 4ರ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ ಹಾಗೂ ಸರ್ಕಾರಿ ಹಣದ ತಾತ್ಕಾಲಿಕ ದುರುಪಯೋಗಕ್ಕೆ ಸ್ಪಷ್ಟ ನಿದರ್ಶನವಾಗಿರುತ್ತದೆ. ಹೀಗಿರುವಾಗ ಮುಂಗಡ ರಶೀದಿ ನೀಡುವ ಕಾನೂನುಬಾಹಿರ ಕ್ರಮ ಅನುಸರಿಸಲಾಗುತ್ತಿತ್ತು ಇದು ಅಬಕಾರಿ ಇಲಾಖೆಯಲ್ಲಿ ಚಾಲ್ತಿಯಲ್ಲಿದ್ದ ಪದ್ಧತಿಯಾಗಿತ್ತು ಆದುದರಿಂದ ಇಲ್ಲಿ ಯಾವುದೇ ದುರ್ನಡತೆ ಎಸಗಿಲ್ಲ ಎಂಬ ಅಪಾದಿತರ ವಾದವು ಕಾನೂನು ಸಮ್ಮತವಲ್ಲ ಕಾನೂನುಬಾಹಿರವಾದ ಯಾವುದೇ ಅಚರಣೆ ಪದ್ಧತಿಯನ್ನು ಅನುಸರಿಸುವುದನ್ನು ಪೂರ್ವನಿದರ್ಶನವಾಗಿ ತೆಗೆದುಕೊಳ್ಳಲು ಕಾನೂನಿನಡಿ ಅವಕಾಶವಿಲ್ಲ ಆದುದರಿಂದ ಖಜಾನೆಗೆ ತಡವಾಗಿ ಹಣ ಜಮಾ ಮಾಡಿರುವುದಕ್ಕೆ ಇಲಾಖೆಯಲ್ಲಿ ಅನುಸರಿಸಲಾಗುತ್ತಿದ್ದ ಪದ್ಧತಿಯಂತೆ ಮುಂಗಡ ರಶೀದಿ ನೀಡಲಾಗಿದೆ ಎಂಬ ಕಲ್ಪಿತ ವಾದವನ್ನು ಒಪ್ಪಲು ಸಾಧ್ಯವಿಲ್ಲ ಅಪಾದಿತರು ತಿಳಿಸಿರುವಂತೆ ಅಬಕಾರಿ ಇಲಾಖೆಯ ಅಧಿಕೃತ ಜ್ಞಾಪನ ಸಂ. ಇಎಕ್ಸ್ಇ–128 ಎಂಐಎಸ್ 87 ದಿನಾಂಕ 10–12–1987 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಅಬಕಾರಿ ಉಪ ಆಯುಕ್ತರು ಇಲಾಖೆಯ ಜಿಲ್ಲಾ ಮಟ್ಟದ ಕಾರ್ಯನಿರ್ವಾಹಕ ಇಲಾಖಾ ಮುಖ್ಯಸ್ಥರಾಗಿದ್ದು ಸರ್ಕಾರಕ್ಕೆ ಬರಬೇಕಾಗಿರುವ ಬಾಕಿಯನ್ನು ಪರಿಣಾಮಕಾರಿ ಕ್ರಮಗಳಿಂದ ವಸೂಲು ಮಾಡುವ ಅಧಿಕಾರ ಮತ್ತು ಜವಾಬ್ದಾರಿ ಹೊಂದಿರುತ್ತಾರೆ. ಅದರಂತೆ ಅಪಾದಿತರು ಗುತ್ತಿಗೆದಾರರು ಗುತ್ತಿಗೆ ಕರಾರಿನಂತೆ ಮಾಸಿಕ ಗುತ್ತಿಗೆ ಹಣವನ್ನು ವಸೂಲು ಮಾಡಲು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳದೇ ಬಾಕಿ ಉಳಿಸಿ, ಬಾಕಿ ವಸೂಲಿಗಾಗಿ ಗುತ್ತಿಗೆದಾರರಿಂದ ಛಾಪಾ ಕಾಗದದ ಮೇಲೆ ಮತ್ತೊಂದು ಲಿಖಿತ ಒಪ್ಪಿಗೆ ಪತ್ರ ಪಡೆದಿರುವುದು ಪರಿಣಾಮಕಾರಿ ಕ್ರಮವಾಗುವುದಿಲ್ಲ ಸರ್ಕಾರಕ್ಕೆ ಬರಬೇಕಾದ ಹಣದ ಬಗ್ಗೆ ಪರಿಣಾಮಕಾರಿ ಕ್ರಮ ಕೈಗೊಳ್ಳುವುದಲ್ಲಿ ಶಿಕ್ಷಾರ್ಹ ಕ್ರಮಗಳ ಸಹ ಸೇರುತ್ತದೆ. ಗುತ್ತಿಗೆದಾರರನ್ನು ಎದುರು ಹಾಕಿಕೊಂಡು ಕೈಗೊಂಡು ಸರ್ಕಾರಕ್ಕೆ ಬರಬೇಕಾದ ಹಣ ಬರುವ ಸಾಧ್ಯವಿರದಂತೆ ಮುನ್ನಡೆವಲ್ಲಿ ಜವಾಬ್ದಾರಿ ಎನಿಸುವುದಿಲ್ಲವೆಂಬ ಅಪಾದಿತರ ಅನಿಸಿಕೆ ಸರಿಯಲ್ಲ, ಗುತ್ತಿಗೆದಾರರ ಬಗ್ಗೆ ಮೃದುಧೋರಣೆ ಅನುಸರಿಸಿ ಗುತ್ತಿಗೆ ಕರಾರಿನಂತೆ ಮಾಸಿಕ ಗುತ್ತಿಗೆ ಹಣ ಮತ್ತು ಸಾರಾಯಿ ಮೇಲಿನ ಅಬಕಾರಿ ಸುಂಕಗಳನ್ನು ವಸೂಲು ಮಾಡಲು ವಿಫಲರಾಗಿ ಸರ್ಕಾರಕ್ಕೆ ರಾಜಸ್ವ ನಷ್ಟವುಂಟು ಮಾಡಿರುವುದರಲ್ಲಿ ಯಾವುದೇ ರೀತಿಯುಲ್ಲಿ ಅಪಾದಿತರ ಜವಾಬ್ದಾರಿಯುತ ಕಾರ್ಯನಿರ್ವಹಣೆ ಕಂಡುಬರುವುದಿಲ್ಲ ಆದಕಾರಣ ಅಪಾದಿತರ ಹೇಳಿಕೆಯು ಒಪ್ಪಲರ್ಹವಲ್ಲ

(8) ಶ್ರೀ ಬಿ.ಆರ್.ಹಿರೇಮಠ ಮತ್ತು ಶ್ರೀ ಅನ್ವರ ಅಹಮದ್ ಅಬಕಾರಿ ನಿರೀಕ್ಷಕರುಗಳನ್ನು ಆರೋಪಮುಕ್ತಗೊಳಿಸಿರುವ ಹಿನ್ನೆಲೆಯನ್ನು ಪರಿಶೀಲಿಸಲಾಗಿ ಈ ಆಪಾಧಿತರು ಜಿಲ್ಲಾ ಮಟ್ಟದ ಕೆಳ ಹಂತದ ಅಧಿಕಾರಿಯಾಗಿದ್ದು ಅಧೀನ ನೌಕರರು ಸರ್ಕಾರದ ರಾಜಸ್ವ ಸಂಗಹಿಸುವುದನ್ನು ಮತ್ತು ಅದನ್ನು ನಿಯಮಾನುಸಾರ ಕೂಡಲೇ ಸರ್ಕಾರದ ಖಜಾನಿಗೆ ಪಾವತಿಸುವುದನ್ನು ಖಾತ್ರಿಪಡಿಸಿಕೊಳ್ಳಬೇಕಾಗಿತ್ತು ಹಾಗೆ ಮಾಡದೇ ಕರ್ತವ್ಯಲೋಪವೆಸಗಿದ್ದು ಅಧೀನ ನೌಕರರು ಸರ್ಕಾರದ ಹಣವನ್ನು ತಾತ್ಕಾಲಿಕ ದುರುಪಯೋಗಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಿರುತ್ತಾರೆ. ಅಧೀನ ಸಿಬ್ಬಂದಿಗೆ ಸರಿಯಾದ ಮಾರ್ಗದರ್ಶನ ನೀಡಿ ಸರ್ಕಾರದ ರಾಜಸ್ವದ ಹಿತ ಕಾಪಾಡಲು ಮತ್ತು ನಿಯಮಗಳನುಸಾರ ಕಾರ್ಯ ನಿರ್ವಹಣೆಗೆ ಉತ್ತಮ ಮಾರ್ಗ ತೋರಬೇಕಾದ ಹುದ್ದೆಯಲ್ಲಿದ್ದ ಅಧಿಕಾರಿಯು ಅಧೀನ ಸಿಬ್ಬಂದಿಯನ್ನು ತಪ್ಪೆಸಗಲು ಅವಕಾಶ ಮಾಡಿಕೊಟ್ಟು ತನ್ನ ಜವಾಬ್ದಾರಿಯನ್ನು ನಿರ್ಲಕ್ಷಿಸಿರುತ್ತಾರೆ. ಅಧೀನ ಸಿಬ್ಬಂದಿಯು ತಾತ್ಕಾಲಿಕ ಹಣ ದುರುಪಯೋಗಪಡಿಸಿಕೊಳ್ಳದಂತೆ ಕಠಿಣ ಕ್ರಮವನ್ನು ಕೈಗೊಳ್ಳಬೇಕಾದ ಅಧಿಕಾರಿಯು ಕರ್ತವ್ಯ ನಿರ್ಲಕ್ಷತೆಯನ್ನು ಅಧೀನ ಸಿಬ್ಬಂದಿಯ ಮೇಲಿನ ಆರೋಪಗಳನ್ನು ಕೈಬಿಟ್ಟಿರುವುದರ ಆಧಾರದಲ್ಲಿ ದೋಷಮುಕ್ತರೆಂದು ಪರಿಗಣಿಸಲು ಕಾರಣಗಳಿರುವುದಿಲ್ಲವೆಂದು ಕಂಡು ಬರುತ್ತದೆ ಈ ಹಿಂದೆ ವಿಚಾರಣಾ ವರದಿ ಒಪ್ಪದೇ ತಳೆಯಲಾದ ನಿರ್ಣಯವು ಆರೋಪಿತರ ಉತ್ತರದ ಪರಿಶೀಲನೆಯ ನಂತರವೂ ಪ್ರಸ್ತುತವಿದೆ.

ಮೇಲಿನ ವಿಶ್ಲೇಷಣೆಯಿಂದಾಗಿ ಆರೋಪಿ ಅಧಿಕಾರಿಗಳ ಉತ್ತರವನ್ನು ಒಪ್ಪಿಕೊಳ್ಳದೇ ಶ್ರೀ ರೋಹಿದಾಸ್ ನಾಯಕ್, ನಿವೃತ್ತ ಅಬಕಾರಿ ಉಪ ಆಯುಕ್ತರ ವಿರುದ್ಧ 1,3,4ನೇ ಆರೋಪಗಳು ಹಾಗೂ ಕೆ.ಆರ್.ಗೌಡರ, ನಿವೃತ್ತ ಅಬಕಾರಿ ಅಧೀಕ್ಷಕರ ವಿರುದ್ಧ 1 ಮತ್ತು 4ನೇ ಆರೋಪಗಳು ಸಾಬೀತಾಗಿವೆ ಹಾಗೂ ತೀವ್ರ ದುರ್ನಡತೆ/ ಆರ್ಥಿಕ ನಷ್ಟ ಉಂಟಾಗಿವೆ ಎಂದು ನಿರ್ಣಯಿಸಿದೆ. ಆದರೆ ಆಪಾಧಿತರು ನೇರವಾಗಿ ಹಣ ದುರ್ಬಳಕೆ ಮಾಡಿರುವುದಿಲ್ಲ ಎಂಬ ನಿರ್ಣಯಕ್ಕೆ ಬಂದ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 90 ಇಪಿಎಸ್ 2003, ಬೆಂಗಳೂರು ದಿನಾಂಕ: 12ನೇ ಸೆಪ್ಟೆಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ರೋಹಿದಾಸ್ ನಾಯಕ್, ನಿವೃತ್ತ ಅಬಕಾರಿ ಉಪ ಆಯುಕ್ತರು ಹಾಗೂ ಕೆ.ಆರ್.ಗೌಡರ್, ನಿವೃತ್ತ ಅಬಕಾರಿ ಅಧೀಕ್ಷಕರು, ಅವರುಗಳ ವಿಶ್ರಾಂತಿ ವೇತನದ ಶೇಕಡ 50ರಷ್ಟು ಮೊತ್ತವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಶಾಶ್ವತವಾಗಿ ಕಡತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,
**ವೆಂಕಟೇಶ್.ಜಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ).

**PR. 827**

## ಕಂದಾಯ ಸಚಿವಾಲಯ

**ವಿಷಯ:–** ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಬನ್ನೇರುಘಟ್ಟ ಶ್ರೀ ಚಂಪಕಧಾಮ ಸ್ವಾಮಿ ದೇವಸ್ಥಾನದ ಸುತ್ತ–ಮುತ್ತಲಿನ ದೇವಾಲಯಗಳನ್ನು ಸಮೂಹ ದೇವಾಲಯಗಳೆಂದು ಪ್ರಕಟಿಸುವ ಕುರಿತು.

**ಓದಲಾಗಿದೆ:–** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಡಿಎಂ 5 ಸಿಆರ್ 95/2012–13 ದಿನಾಂಕ:01–02–2014

**ಪ್ರಸ್ತಾವನೆ:–**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ಗ್ರಾಮದ ಶ್ರೀ ಚಂಪಕಧಾಮ ಸ್ವಾಮಿ ದೇವಾಲಯವು ಪ್ರವರ್ಗ "ಎ" ಅಧಿಸೂಚಿತ ಸಂಸ್ಥೆಯಾಗಿದ್ದು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 87 ಮುಆಬಿ 2012 ದಿನಾಂಕ: 29–09–2012 ರಂದು ಕ್ರಮ ಸಂಖ್ಯೆ:(199) ರಲ್ಲಿ ಪ್ರಕಟಿಸಲಾಗಿರುತ್ತದೆ.

ಸದರಿ ದೇವಾಲಯಕ್ಕೆ ಸೇರಿದ ಆಸ್ತಿಯಲ್ಲಿ ಶ್ರೀ ಮಹಾಲಕ್ಷ್ಮೀ ದೇವಾಲಯ, ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ ಮತ್ತು ಸುವರ್ಣಮುಖಿ ಕ್ಷೇತ್ರದ ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ರಾಮಲಿಂಗೇಶ್ವರ ದೇವಾಲಯ, ಶ್ರೀ ಸೋಮಲಿಂಗೇಶ್ವರ ದೇವಾಲಯ, ಶ್ರೀ ಭವಾನಿ ಶಂಕರ ದೇವಾಲಯ, ಶ್ರೀ ಅಂಬಾ ಭವಾನಿ ದೇವಾಲಯ, ಅಶ್ವತ್ಥಕಟ್ಟೆ – ನಾಗದೇವರುಗಳ ದೇವಾಲಯಗಳು ಇರುತ್ತದೆ. ಪ್ರಸ್ತುತ ಈ ಎಲ್ಲಾ ದೇವಾಲಯಗಳ ಆಡಳಿತ ವ್ಯವಹಾರವು ಶ್ರೀ ಚಂಪಕಧಾಮ ಸ್ವಾಮಿ ದೇವಾಲಯದ ಕಛೇರಿಯಲ್ಲಿ ವ್ಯವಹಾರಗಳು ನಡೆಸಲಾಗುತ್ತಿದೆ. ಮ್ಯುಟೇಷನ್ ರಿಜಿಸ್ಟರ್ ಪ್ರತಿಯಲ್ಲಿ ಸರ್ವೆ ನಂ.2 ರಲ್ಲಿ 13.38 ಎಕರೆ ಜಮೀನು ದೇವಸ್ಥಾನದ ಹೆಸರಿಗೆ ನಮೂದಾಗಿದ್ದು, ಇದರಲ್ಲಿ ಶ್ರೀ ಚಂಪಕಧಾಮ ಸ್ವಾಮಿ ದೇವಾಲಯ ಹಾಗೂ ಇದರ ಬೆಟ್ಟ ಮತ್ತು ಸುವರ್ಣಮುಖಿ ಕಲ್ಯಾಣಿ ಇರುವುದಾಗಿ ನಮೂದಾಗಿರುತ್ತದೆ. ಶ್ರೀ ಸುವರ್ಣಮುಖಿ ದೇವಾಲಯ, ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ನರಸಿಂಹ ಸ್ವಾಮಿ ದೇವಾಲಯಗಳು ಒಂದೇ ಧರ್ಮದರ್ಶಿ ಮಂಡಳಿಯ ನಿರ್ವಹಣೆಯಲ್ಲಿ ನಡೆಸಲಾಗುತ್ತಿದೆ.

ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ಶ್ರೀ ಚಂಪಕಧಾಮ ಸ್ವಾಮಿ ದೇವಾಲಯದ ವ್ಯಾಪ್ತಿಯಲ್ಲಿ ಬರುವ ದೇವಾಲಯಗಳು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಕೈಬಿಟ್ಟು ಹೋಗಿರುವುದರಿಂದ ಸ್ಥಳೀಯ ಅಧಿಕಾರಿಗಳ ಕೋರಿಕೆಯಂತೆ ಶ್ರೀ ಮಹಾಲಕ್ಷ್ಮೀ ದೇವಾಲಯ, ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ ಮತ್ತು ಸುವರ್ಣಮುಖಿ ಕ್ಷೇತ್ರದ ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ರಾಮಲಿಂಗೇಶ್ವರ ದೇವಾಲಯ, ಶ್ರೀ ಸೋಮಲಿಂಗೇಶ್ವರ ದೇವಾಲಯ, ಶ್ರೀ ಭವಾನಿ ಶಂಕರ ದೇವಾಲಯ, ಶ್ರೀ ಅಂಬಾ ಭವಾನಿ ದೇವಾಲಯ, ಅಶ್ವತ್ಥಕಟ್ಟೆ – ನಾಗದೇವರುಗಳ ದೇವಾಲಯಗಳನ್ನು ಶ್ರೀ ಚಂಪಕಧಾಮ ಸ್ವಾಮಿ ದೇವಾಲಯದ ಸಮೂಹ ದೇವಾಲಯಗಳೆಂದು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 13 ಮುಆಬಿ 2014, ಬೆಂಗಳೂರು; ದಿನಾಂಕ: 07ನೇ ಸೆಪ್ಟೆಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ಗ್ರಾಮದ ಶ್ರೀ ಚಂಪಕಧಾಮ ಸ್ವಾಮಿ ದೇವಾಲಯದ ವ್ಯಾಪ್ತಿಯಲ್ಲಿ ಬರುವ ಶ್ರೀ ಮಹಾಲಕ್ಷ್ಮೀ ದೇವಾಲಯ, ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ ಮತ್ತು ಸುವರ್ಣಮುಖಿ ಕ್ಷೇತ್ರದ ಶ್ರೀ ಆಂಜನೇಯಸ್ವಾಮಿ ದೇವಾಲಯ, ಶ್ರೀ ರಾಮಲಿಂಗೇಶ್ವರ ದೇವಾಲಯ, ಶ್ರೀ ಸೋಮಲಿಂಗೇಶ್ವರ ದೇವಾಲಯ, ಶ್ರೀ ಭವಾನಿ ಶಂಕರ ದೇವಾಲಯ, ಶ್ರೀ ಅಂಬಾ ಭವಾನಿ ದೇವಾಲಯ, ಅಶ್ವತ್ಥಕಟ್ಟೆ ಮತ್ತು ನಾಗದೇವರು ಈ ಎಲ್ಲಾ ದೇವಾಲಯಗಳನ್ನು **"ಶ್ರೀ ಚಂಪಕಧಾಮ ಸ್ವಾಮಿ ದೇವಾಲಯದ ಸಮೂಹ ದೇವಾಲಯಗಳೆಂದು"** ಪ್ರಕಟಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

**PR. 772** ಸರ್ಕಾರದ ಅಧೀನ ಕಾರ್ಯದರ್ಶಿ

**SC. 25** ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು, ಬಸವನಗುಡಿ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಖಾಲಿ ಜಾಗವನ್ನು ದ್ವೈತ ವೇದಾಂತ ಅಧ್ಯಯನ ಮತ್ತು ಸಂಶೋಧನಾ ಸಂಸ್ಥೆಗೆ ಗುತ್ತಿಗೆ ನೀಡಿರುವುದನ್ನು ರದ್ದುಪಡಿಸುವ ಬಗ್ಗೆ

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ:ಕಂಇ 27 ಮುಆಬಿ 2007 ದಿನಾಂಕ:21.03.2007

(2) ಆಯುಕ್ತರು, ಧಾರ್ಮಿಕದತ್ತಿ ಇಲಾಖೆರವರ ಪತ್ರ ಸಂಖ್ಯೆ:ಎಡಿಎಂ/03/ಎಲ್ಎನ್‌ಡಿ/111/2006–07 ದಿನಾಂಕ:17.05.2013

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ದಿನಾಂಕ:21.03.2007ರಲ್ಲಿ ಬೆಂಗಳೂರು ನಗರ ಬಸವನಗುಡಿಯಲ್ಲಿರುವ ದ್ವೈತ ವೇದಾಂತ ಅಧ್ಯಯನ ಮತ್ತು ಪರಿಶೋಧನೆ ಸಂಸ್ಥೆಗೆ ಬಸವನಗುಡಿ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಸೇರಿದ 38.50 x 41 ಅಡಿ ಖಾಲಿ ನಿವೇಶನವನ್ನು ಮಾಹೆಯಾನ ₹.1000/–ಗಳ ಬಾಡಿಗೆ ನಿಗಧಿಪಡಿಸಿ, ಈ ಬಾಡಿಗೆಯನ್ನು ಪ್ರತಿ ವರ್ಷ ಶೇ.5 ರಷ್ಟನ್ನು ಹೆಚ್ಚಿಸುವ ಷರತ್ತಿಗೆ ಒಳಪಟ್ಟು ಹಾಗೂ ಚದರ ಮೀಟರಿಗೆ ₹.300/– ರಂತೆ ಗುಡ್‌ವಿಲ್ ನಿಗಧಿಪಡಿಸಿ ದಿನಾಂಕ:20.03.2022 ರವರೆಗೆ ಅಂದರೆ, 15 ವರ್ಷಗಳ ಅವಧಿಗೆ ಗುತ್ತಿಗೆ ಮಂಜೂರು ಮಾಡಿ ಆದೇಶಿಸಲಾಗಿತ್ತು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮೇಲೆ ಓದಲಾದ (2)ರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ:17.05.2013ರಲ್ಲಿ ಬೆಂಗಳೂರು ನಗರ, ಬಸವನಗುಡಿಯಲ್ಲಿರುವ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ 38.50 x 41 ಅಡಿ ಖಾಲಿ ನಿವೇಶನವನ್ನು ದ್ವೈತ ವೇದಾಂತ ಅಧ್ಯಯನ ಮತ್ತು ಪರಿಶೋಧನಾ ಸಂಸ್ಥೆಗೆ ಗುತ್ತಿಗೆಗೆ ನೀಡಿರುವ ಸ್ವತ್ತಿನ ಗುಡ್‌ವಿಲ್ ಮೊತ್ತ ₹.44,250–00ಗಳನ್ನು ಹಾಗೂ ಆರು ತಿಂಗಳ ಬಾಡಿಗೆ ಮುಂಗಡ ₹.6,000–00 ಗಳನ್ನು ದಿನಾಂಕ:19.06.2007 ರಲ್ಲಿ ಪಾವತಿಸಿ, ಏಪ್ರಿಲ್ 2010 ರವರೆಗೆ ಮಾಸಿಕ ಬಾಡಿಗೆಯನ್ನು ಪಾವತಿ ಮಾಡಿರುತ್ತಾರೆ. ಆದರೆ ಗುತ್ತಿಗೆ ನೀಡಲಾದ ಸ್ವತ್ತಿನಲ್ಲಿ ಗುತ್ತಿಗೆದಾರರು ಸ್ವಾಧೀನತೆ ಹೊಂದಿರುವುದಿಲ್ಲವೆಂದು, ದೇವಾಲಯಕ್ಕೆ ಸೇರಿದ ಜಾಗವನ್ನು ದ್ವೈತ ವೇದಾಂತ ಅಧ್ಯಯನ ಸಂಸ್ಥೆಗೆ ದೀರ್ಘಾವದಿಗೆ ಹಾಗೂ ಕಡಿಮೆ ಬಾಡಿಗೆಗೆ ಗುತ್ತಿಗೆಗೆ ನೀಡಿರುವ ಕುರಿತಂತೆ ಸಿ.ಎ.ಜಿ. ವರದಿಯಲ್ಲಿ ಮಹಾಲೇಖಪಾಲರು ಆಕ್ಷೇಪಿಸಿರುತ್ತಾರೆ.

ಸದರಿ ಸಂಸ್ಥೆಗೆ ಮಂಜೂರು ಮಾಡಿರುವ ಜಾಗದಲ್ಲಿ ಉತ್ತರ ಶ್ರೀ ಆಂಜನೇಯಸ್ವಾಮಿ ದೇವಾಲಯದ ರಸ್ತೆಯಿಂದ ಭಕ್ತಾದಿಗಳು ದೇವಾಲಯಕ್ಕೆ ಬರುವ ಪ್ರವೇಶ ದ್ವಾರವಾಗಿದ್ದು, ಈ ಜಾಗದಲ್ಲಿ ಕಟ್ಟಡ ನಿರ್ಮಿಸಿದಲ್ಲಿ ದೇವಾಲಯಕ್ಕೆ ಬರುವ ಭಕ್ತಾದಿಗಳ ಓಡಾಟಕ್ಕೆ ಅಡಚಣೆ ಆಗುವುದು ಮತ್ತು ಸದರಿ ಗುತ್ತಿಗೆಯು ದೇವಾಲಯದ ಹಿತಾಸಕ್ತಿಗೆ ಪೂರಕವಾಗಿಲ್ಲದಿರುವುದರಿಂದ ಗುತ್ತಿಗೆಗೆ ನೀಡಿರುವ ಆದೇಶವನ್ನು ರದ್ದುಪಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 45 ಮುಆಬಿ 2013; ಬೆಂಗಳೂರು, ದಿನಾಂಕ: 08ನೇ ಸೆಪ್ಟಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಂಗಳೂರು ನಗರ ಬಸವನಗುಡಿಯಲ್ಲಿರುವ ದ್ವೈತ ವೇದಾಂತ ಅಧ್ಯಯನ ಮತ್ತು ಪರಿಶೋಧನೆ ಸಂಸ್ಥೆಗೆ ಬಸವನಗುಡಿ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಸೇರಿದ 38.50 x 41 ಅಡಿ ಗುತ್ತಿಗೆಗೆ ನೀಡಲಾದ ಖಾಲಿ ನಿವೇಶನವನ್ನು ಗುತ್ತಿಗೆದಾರರು ಉದ್ದೇಶಿತ ಕಾರ್ಯಕ್ಕೆ ಉಪಯೋಗಿಸಿಕೊಂಡಿರುವುದಿಲ್ಲ, ಏಪ್ರಿಲ್ 2010 ರಿಂದ ಬಾಡಿಗೆಯನ್ನು ಪಾವತಿಸಿರುವುದಿಲ್ಲ ಮತ್ತು ಸದರಿ ಜಾಗವು ಶ್ರೀ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಅವಶ್ಯಕವಾಗಿರುವುದರಿಂದ ದ್ವೈತ ವೇದಾಂತ ಅಧ್ಯಯನ ಮತ್ತು ಪರಿಶೋಧನಾ ಸಂಸ್ಥೆಗೆ ಸರ್ಕಾರದ ಆದೇಶ ಸಂಖ್ಯೆ:ಕಂಇ 27 ಮುಆಬಿ 2007 ದಿನಾಂಕ:12.03.2007 ರಲ್ಲಿ ಗುತ್ತಿಗೆಗೆ ನೀಡಿರುವ ಆದೇಶವನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸದರಿ ಜಾಗವನ್ನು ಕೂಡಲೇ ಇಲಾಖಾ ವಶಕ್ಕೆ ಪಡೆಯುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

PR. 773

SC. 25

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59